# ಸಂಚಯ

ಸಾಂಸ್ಕೃತಿಕ ಸಂಕಲನ
(ಖಾಸಗಿ ಪ್ರಸಾರಕ್ಕಾಗಿ)

ಸಂಪುಟ : 5 ಸಂಚಿಕೆ : 4-5-6

**ಈ ಸಂಚಯದಲ್ಲಿ...**



ಸಂಪಾದನೆ/ಪ್ರಕಟಣೆ : ಸಂಚಯ ಬಳಗ

ವಾರ್ಷಿಕ ಚಂದಾ : ರೂ. 45-00

ಮುಖಪುಟ : ರವಿಕುಮಾರ ಕಾಶಿ

ವಿಳಾಸ : 24/ಡಿ, 17ನೇ ಮುಖ್ಯ ರಸ್ತೆ, ಮುನೇಶ್ವರ ಬ್ಲಾಕ್
ಬನಶಂಕರಿ 3ನೇ ಹಂತ, ಬೆಂಗಳೂರು-560 026

# ನಿಮ್ಮೊಡನೆ

ಪ್ರಿಯ ಓದುಗರೆ

ಬಹಳ ತಿಂಗಳುಗಳ ನಂತರ ಮತ್ತೆ ಸಂಚಯ ನಿಮ್ಮ ಕೈ ಸೇರುತ್ತಿದೆ. ಸಂಚಯ ನಿಂತೇ ಹೋಗಿತ್ತು, ಆದರೆ ಅನೇಕ ಹಿರಿಯರ ಗೆಳೆಯರ ಬೆಂಬಲ ಮತ್ತೆ ಹುರುಪಿನಿಂದ ನಾವು ಇದಕ್ಕೆ ಪುನರ್ ಜೀವ ಕೊಡುವ ಕೆಲಸಕ್ಕೆ ಕೈ ಹಾಕುವಂತೆ ಮಾಡಿದೆ. ಸಂಚಯದ ಪುಟಗಳನ್ನ ಹೆಚ್ಚಿಸಿ ವರ್ಷದಲ್ಲಿ ಆರು ಸಂಚಿಕೆಗಳೂ ನಿಯಮಿತವಾಗಿ ಹೊರಬರುವಂತೆ ಹೆಚ್ಚು ಉಪಯುಕ್ತವಾಗುವಂತೆ ಯೋಜಿಸಿದ್ದೇವೆ. ಇಲ್ಲಿಯವರೆಗೂ ಸಾಹಿತ್ಯ ಕಲೆಗಳಷ್ಟೇ ಕೇಂದ್ರವಾಗಿದ್ದ ಸಂಚಯದಲ್ಲಿ ಇನ್ನುಮುಂದೆ ವಿಚಾರ, ಶಿಕ್ಷಣ, ಪರಿಸರ ಮುಂತಾದ ನಮ್ಮ ಸಮಕಾಲೀನ ಸಂಸ್ಕೃತಿಯ ಮುಖಗಳನ್ನ ಸಮಸ್ಯೆಗಳನ್ನ ಬಿಂಬಿಸುವಂತೆ ವ್ಯಾಪ್ತಿಯನ್ನ ಹಿರಿದುಗೊಳಿಸಲಾಗಿದೆ. ವಿವಿಧ ಕ್ಷೇತ್ರಗಳ ಉತ್ತಮ ಗಂಭೀರ ವಿಚಾರಗಳನ್ನ ಓದುಗರಿಗೆ ತಲುಪಿಸುವ ಆಶಯ ನಮ್ಮದು, ಇದಕ್ಕೆ ಈ ಹಿಂದಿಗಿಂತಲೂ ಹಣದ ಮತ್ತು ಓದುಗರ ಬಳಗ ವಿಸ್ತಾರವಾಗಬೇಕಾದ ಅಗತ್ಯ ಇದೆ, ಇದಕ್ಕಾಗಿ ವಾರ್ಷಿಕ ಚಂದಾ ಹಣವನ್ನು ರೂ. 45 ಕ್ಕೆ ಹೆಚ್ಚಿಸಲಾಗಿದೆ, ಹೊರನೋಟಕ್ಕೆ ಇದು ದುಬಾರಿ ಎನ್ನಿಸಿದರೂ ಯಾವುದೇ ಹೊರಗಿನ ಹಣಕಾಸು ಸಹಾಯವಿಲ್ಲದ, ಮತ್ತು ದುಬಾರಿಯಾದ ಮುದ್ರಣ ಅಂಚೆ ವೆಚ್ಚಗಳ ನಡುವೆ, ಯಾವುದೇ ಲಾಭ ಮಾಡಿಕೊಳ್ಳುವ ಉದ್ದೇಶ ಹೊಂದಿರದ ನಮ್ಮ ಪ್ರಯತ್ನಕ್ಕೆ ನೀವು ಕೊಡುವ ಚಂದಾ ಹಣ ಮಾತ್ರಾ ಜೀವದಾನ ಮಾಡುತ್ತದೆ.

ಈ ಸಂಚಿಕೆಯ ಜೊತೆ 91 ರ ಸಾಲಿನ ಸಂಚಯದ ಪ್ರಕಟಣೆ ಪೂರ್ಣಗೊಳ್ಳುತ್ತದೆ. ಉಳಿದ ಎರಡು ಸಂಚಿಕೆಗಳ ಬದಲಾಗಿ ಸಂಚಯದ ಐದನೇ ವರ್ಷದ ನೆನಪಿಗೆ ನಾವು ಹೊರತಂದಿರುವ ವಿವಿಧ ಕವಿಗಳ "ಗಾಜು" ಕವನ ಸಂಕಲನವನ್ನ ನಮ್ಮ ಓದುಗರಿಗಾಗಿ ವಿಶೇಷವಾಗಿ ಕೊಡುತ್ತಿದ್ದೇವೆ. ಈ ಪುಸ್ತಕ ಸಂಚಯದ ಎರಡು ಸಂಚಿಕೆಗಳ ಸಂಯುಕ್ತ ರೂಪದಲ್ಲಿ ಹೊರಬರಬೇಕಿತ್ತು, ಓದುಗರು ನಮ್ಮ ತೊಂದರೆ ಅರ್ಥಮಾಡಿಕೊಂಡು ಸಹಕರಿಸುತ್ತೀರಿ ಎನ್ನುವ ಆಶಯ ನಮ್ಮದು.

ಸಂಚಯದ ವಿಳಾಸ ಬದಲಾಗಿದೆ ಗಮನಿಸಿ, ಹೊಸಹುಟ್ಟು ಪಡೆಯುತ್ತಿರುವ ಸಂಚಯವನ್ನ ಪ್ರೋತ್ಸಾಹಿಸಿ ಎಂದು ಕೋರುತ್ತೇವೆ.

**–ಸಂಪಾದಕ**

# ಮೊದಲಗಿತ್ತಿ

–ದ. ರಾ. ಬೇಂದ್ರೆ
('ನಾದಲೀಲೆ' ಸಂಕಲನದಿಂದ)

ಮೊದಲಗಿತ್ತಿಯಂತೆ ಮೆರೆಯುವಿಯೇ ತಾಯಿ ।
ಮೊದಲಗಿತ್ತಿಯಂತೆ ಮೆರೆಯುತಿಹೆ ॥ಪ॥
ಹಿಂಡಾಗಿ ಪುಂಡರು ಅಂಡಲೆಯಲು ನಿನ್ನ
ನೆತ್ತರು ಒರೆಹಚ್ಚಿ ನೋಡಿರುವೆ
ಪಾತಾಳ ಕಂಡರು ಕೆಲ ತಾಯಿಗ್ಗಂಡರು
ಅವರನ್ನೂ ಮಡಿಲಾಗ ಮಡಗಿಸಿಹೆ
ಹದಿನಾರು ರಾಜರು ತಲೆಕೆಳಗಾದರು
ಆದರು ತಲೆಯೆತ್ತಿ ನಿಂತಿರುವೆ
ನಿನ್ನ ತೇಜದ ಮುಂದೆ ರಾಜತೇಜವು ಕೂಸು
ಮೊದಲಗಿತ್ತಿಯು ನೀನು ಮೆರೆಯುತಿಹೆ.

ಒಕ್ಕಡಿತೆ ಅರೆಮುಕ್ಕು ಎನುತೆನುತೆ ಹಲಕೆಲವು
ಪಾನಿಪತ್ತುಗಳನ್ನು ಮುಕ್ಕುಳಿಸುವೆ
ಕೊಡಲಿ ರಾಮನು ಎರೆದ ಕೆನ್ನೀರ ಜಳಕಕ್ಕೆ
ಕೂದಲು ನನೆಯಲಿಲ್ಲೆನ್ನುತಿಹೆ
ಅವತಾರಕೊಂದೊಂದು ಅಭಿಷೇಕ ಮಾಡಿದರು
ಎಣ್ಣೆಮಜ್ಜನ ಬೇರೆ ಬೇಕೆನುವೆ
ನೆತ್ತರ ಮೀಯಿಸುವ ಕೆಂಚರ ಕೈಯಿಳಿಸಿ
ಮೊದಲಗಿತ್ತಿಯೆ ನೀನು ಮೆರೆಯುತಿಹೆ.

ಹಾಲಿನ ಹೃದಯಕ್ಕೆ ಕುಬ್ಬುಸವನು ತೊಡಿಸಿ
ಹೂ ಮುಡಿಸಿಕೊಂಡೆಂದು ನೀನಲಿವೆ.
ಬಸಿರು ತುಂಬಲು ಹಸಿರುಡಿಗೆಯನುಟ್ಟಿಂದು
ವನವಾಸ ನವಮಾಸ ತೀರಿಸುವೆ.

ಮುನ್ನಿಲ್ಲ ಇನ್ನಾರೆ ಮಕ್ಕಳ ದಿನವೆಂದು
ಮೂಡೀತು ಹೇಳವ್ವ ಬಿನ್ನವಿಸುವೆ.
ಎಂದು ಮಂಗಲ ನಿನ್ನ ದೇವಗರ್ಭಕೆ ?—ಇನ್ನೂ
ಮೊದಲಗಿತ್ತಿಯಂತೆ ಮೆರೆಯುತಿಹೆ !

---

ಭೂಮಿಯ ಮತ್ತೆ ಮತ್ತೆ ಹುಟ್ಟುವ ಸಹಜಗುಣ ಬಿಂಬಿಸುವ ಈ ಕವಿತೆಯನ್ನ ಭೂಮಿ ಮತ್ತು ಪರಿಸರ ಕುರಿತ ಕಾಳಜಿಗಳು ಬಲವಾಗುತ್ತಿರುವ ಸಂದರ್ಭದಲ್ಲಿ ನಮ್ಮ ಓದುಗರಿಗೆ ವಿಶೇಷ ಆಯ್ಕೆಯಾಗಿ ಪ್ರಕಟಿಸುತ್ತಿದ್ದೇವೆ.

---

**ಅನುವಾದ !**

---

## ಕತೂಷಿಕಾ

ಕತೂಪಿಕಾ ನಗರದಲ್ಲಿ
ತೊರೆ ಮೆಲ್ಲನೆ ಹರಿವಾಗ
ದಾಳಿಂಬೆ ಮೊಗ್ಗು ನಕ್ಕು
ಒಮ್ಮೆಲೇ ಬಿರಿದಾಗ
ತಾಳಲಾರದೆ ಆನಂದ
ಹಾಡುತ್ತದೆ ಕೋಗಿಲೆ.
ನಮ್ಮ ಮಿಲನಕ್ಕಾಗಿ
ಇಷ್ಟು ಸಡಗರವೆ ?

ತಂಗಾಳಿಯ ಚುಂಬನಕ್ಕೆ
ಮರದ ಜೀಕು ಉತ್ತರ.
ನನ್ನ ತುಟಿಗೂ ನಿನ್ನ ತುಟಿಗೂ
ಬಹಳ ಬಹಳ ಹತ್ತಿರ.

ಮೂಲ : ಒಂದು ಜಪಾನೀ "ಗೇಷಾ" ಹಾಡು.
ಕನ್ನಡಕ್ಕೆ : ಪಿ. ಪಿ, ರವಿಕುಮಾರ್

# ಮೋಹನ ಮುರಳಿಯ ಜೊತೆ ಮಾತುಕತೆ

ಸಂದರ್ಶನ : ಡಿ. ವಿ. ಪ್ರಹ್ಲಾದ್
ಸಹಾಯ : ನ. ರವಿಕುಮಾರ್, ಶ್ರೀನಿವಾಸ್

ಗೋಪಾಲಕೃಷ್ಣ ಅಡಿಗ ಕನ್ನಡ ಕಾವ್ಯ ಪಡೆದ ಒಬ್ಬ ವಿಶಿಷ್ಟ ಕವಿ. ತಮ್ಮ ಬರಹಗಳಿಂದ ಕನ್ನಡ ಕಾವ್ಯದ ದಿಕ್ಕನ್ನ ಅಡಿಗರು ಬದಲಾಯಿಸಿದರಾದರೂ, ಅನೇಕ ವಿವಾದಾತ್ಮಕ ನಿಲುವುಗಳನ್ನು ಹೊಂದಿದವರು, ತಮ್ಮ ನಂಬಿಕೆ ಮತ್ತು ಕಾವ್ಯದ ಕಾರಣಕ್ಕಾಗಿ ಅಡಿಗರು ಅನೇಕರ ಕಟು ಟೀಕೆ ವಿಮರ್ಶೆಗಳನ್ನು ಎದುರಿಸಿಯೂ ತಮ್ಮತನ ಉಳಿಸಿಕೊಂಡವರು. 74 ವರ್ಷ ವಯಸ್ಸಿನ ವೃದ್ಧ ಅಡಿಗರನ್ನ ಇತ್ತೀಚೆಗೆ ಭೇಟಿಯಾದಾಗಲೂ ನಾವುಗಳು ಗುರುತಿಸಿದ್ದು ಕೆಂಡದ ಹಾಗಿನ ಅವರ ಅಡಿಗತ್ವವನ್ನು. ಒಡೆಯುತ್ತಿರುವ ವ್ಯವಸ್ಥೆಯನ್ನು ಕುರಿತಾದ ಅವರ ಕಾಳಜಿಯ ಜೊತೆಗೆ ಜೀವನದ ಬಗ್ಗೆ, ಮನುಷ್ಯನ ಬಗ್ಗೆ, ಸಮಾಜದ ಬಗ್ಗೆ, ಭೂತ ವರ್ತಮಾನ ಭವಿಷ್ಯತ್ತುಗಳ ಬಗ್ಗೆ ಅವರಲ್ಲಿ ಉತ್ತರ ಸಿಕ್ಕಿದೆ ಎನ್ನುವ ಧೋರಣೆ ಕಾಣುವುದಿಲ್ಲ. ಇನ್ನೂ ಹುಡುಕುವ ಹೊಸದನ್ನ ಶೋಧಿಸುವ ಮನೋಭಾವ ಕಂಡುಬರುತ್ತದೆ. ಪ್ರತಿಗಾಮಿ–ಬಲಪಂಥೀಯ ಎನ್ನುವ ಅವರ ಅನೇಕ ನಿಲುವುಗಳಲ್ಲೂ ನಿಜವಾದ ಪ್ರಾಮಾಣಿಕತೆ ಇದೆ. ಈ ಸಂದರ್ಶನದಲ್ಲಿ ಅನೇಕ ಕಡೆ ಅಡಿಗರು contradictory ಎನ್ನಿಸುವ ಮಾತುಗಳನ್ನಾಡಿದ್ದರೂ ಅವುಗಳಲ್ಲಿ ಎದ್ದು ಕಾಣುವುದು ಅವರ ಅಚಲವಾದ ನಂಬಿಕೆಗಳು. ಅಡಿಗರು ಈವರೆಗೂ ಹೆಚ್ಚು ಮಾತಾಡಿರುವುದು ಕಾವ್ಯದ ಮೂಲಕವೇ ಆದರೂ ಅವರ ಮಾತುಗಳು ನಿಲುವುಗಳು ಮತ್ತೆ ಮತ್ತೆ ಚರ್ಚೆ ವಿವಾದಗಳಿಗೆ ಒಳಗಾಗಿವೆ. ಅಡಿಗರಿಗೆ ಸಮಾಜದ ರಾಜಕೀಯದ ಟೊಳ್ಳು ಕಪಟ ಮೋಸಗಳ ಮೇಲೆ ಕ್ರೋಧವಿದೆ. ಬರಿ ಮಾತಿನ ನಿಷ್ಕ್ರಿಯ ಜಡ ವ್ಯವಸ್ಥೆಯ ಬಗ್ಗೆ ಅತೃಪ್ತಿ ಅಸಮಾಧಾನಗಳಿವೆ. ತಾವು ನಂಬಿದ್ದ, ಕನಸು ಕಂಡಿದ್ದ ಮೌಲ್ಯ ವ್ಯವಸ್ಥೆಯಿಂದ ದೂರ ಸರಿಯುತ್ತಿರುವ ಸಮಾಜವನ್ನು ಕುರಿತು ಅಸಮಾಧಾನವಿದೆ. ಇವುಗಳೆಲ್ಲದರ ಮಧ್ಯೆ ಮನುಷ್ಯನ ಬದುಕು ಹಸನಾಗಬೇಕೆನ್ನುವ ತಣ್ಣನೆಯ ಕಾಳಜಿಯೂ ನಿರಂತರವಾಗಿದೆ.

* ನಿಮ್ಮ ಕಾವ್ಯವನ್ನು ಒಂದು ನಿರಂತರವಾದ ರಾಜಕೀಯ ಪ್ರತಿಕ್ರಿಯೆ ಎಂದು ಗುರುತಿಸುತ್ತಾರೆ. ಜೊತೆಗೆ ನೀವೂ ರಾಜಕೀಯದಲ್ಲಿ ಹೆಚ್ಚು ಸಕ್ರಿಯ

ವಾಗಿ ಆಸಕ್ತರಾಗಿದ್ದಿರಿ, ಇವತ್ತಿನ ರಾಜಕೀಯ ಪರಿಸ್ಥಿತಿ ಕುರಿತು ನಿಮ್ಮ ಅನಿಸಿಕೆ ಏನು ?

o ನಮ್ಮಲ್ಲಿ ಪ್ರಜಾತಂತ್ರ ಬಂತು, ಈ ಕಾಲಕ್ಕೆ ಹೇಳಿ ಮಾಡಿಸಿದ್ದು. ಅತ್ಯಂತ ಅನುಗುಣವಾದ ರಾಜಕೀಯ ವ್ಯವಸ್ಥೆ. ಆದರೆ ಆದು ಯಶಸ್ವಿಯಾಗ-ಬೇಕಾದರೆ ಪ್ರಜೆಗಳಲ್ಲಿ ವಿವೇಕ ಬೇಕು. ಯಾವುದು ಒಳ್ಳೇದು ಯಾವುದು ಕೆಟ್ಟದ್ದು ಯಾವುದು ಯೋಗ್ಯ ಯಾವುದು ಅಯೋಗ್ಯ ಎನ್ನೋದನ್ನ ಜಾತಿ ಮತ ಇತ್ಯಾದಿ-ಗಳನ್ನ ಯೋಚನೆ ಮಾಡದೆ ಸರಿಯಾದ ಶ್ರೇಷ್ಠ ಮನುಷ್ಯರನ್ನ ಆರಿಸೋ ಶಕ್ತಿ ಬೇಕು. ಯಾಕೆಂದರೆ ಪ್ರಜಾತಂತ್ರದಲ್ಲಿ ಸಾರ್ವಭೌಮತ್ವ ಇರೋದು ಪ್ರಜೆಗಳಲ್ಲಿ. ಆದರೆ ಎಲ್ಲರಿಗೂ ರಾಜ್ಯಭಾರ ಮಾಡೊಕ್ಕಾಗಲ್ಲ, ಆದಕ್ಕೆ ಶಿಕ್ಷಣದ ಜೊತೆಗೆ ವ್ಯವಸ್ಥಾತ್ಮಕವಾಗಿ ಜನಗಳನ್ನ ಒಂದುಗೂಡಿಸೋ ಶಕ್ತಿ ಬೇಕು. ಇಂಥಾ ಜನ ಎಲ್ಲಾ ಜಾತಿಗಳಲ್ಲಿ ಎಲ್ಲಾ ಕಾಲದಲ್ಲೂ ಇರ್ತಾರೆ, ಆದನ್ನು ಗುರುತಿಸಬೇಕು, ಇದಕ್ಕೆ ಎಂಥಾ ಶಿಕ್ಷಣ ಬೇಕು ಅಂದ್ರೆ ಜಾತಿ ಮತಗಳನ್ನ ಬಿಟ್ಟು ಯೋಚಿಸುವಂಥಾದ್ದು. ವಸ್ತುನಿಷ್ಠ ವಿಚಾರಶಕ್ತಿ ; ಇದು ಬರುತ್ತೇ ಅಂತ ತಿಳಿದುಕೊಂಡು ನಾವು ಆ ಕಾಲದಲ್ಲಿ ರಾಜಕೀಯ ದಲ್ಲಿ ಆಸಕ್ತಿ ತೋರಿಸಿದೆವು. ಆದರೆ ಇವತ್ತು ಪ್ರಜಾಪ್ರಭುತ್ವ ಕೂಡಾ ಯಶಸ್ವಿಯಾಗಿಲ್ಲ ಇದು ಪ್ರಜಾತಂತ್ರವಾಗಿಲ್ಲ. ಅತಂತ್ರ ಸ್ಥಿತಿಯೊಂದು ಬರ್‍ತಾ ಇದೆ.

* ಹಾಗಿದ್ದರೆ ಇದಕ್ಕೆ ಪರ್ಯಾಯ ಏನನ್ನ ಯೋಚಿಸಬಹುದು ?

o ಅದನ್ನ ಸಮಯವೇ ನಮಗೆ ತಿಳಿಸಬೇಕು. ಕಾಲಕ್ರಮೇಣ, ಈಗ ಎಲ್ಲವೂ ಅತ್ಯಂತ ನಿಕೃಷ್ಟ ಸ್ಥಿತಿಗೆ ಬರುತ್ತಿದೆ. ಒಳ್ಳೆಯವರ ಸಂಖ್ಯೆ ಬಹಳ ಕಡಿಮೆ ಆಗ್ತಾ ಇದೆ. ಕೆಟ್ಟೋರ ಸಂಖ್ಯೆ ಜಾಸ್ತಿಯಾಗ್ತಾ ಇದೆ. ಕಳವು ಕೊಲೆ ಮೋಸ ತಟವಟ ವಂಚನೆ ಲಂಚ ಇವುಗಳಿಗೆ ಆದಿ ಅಂತ್ಯಗಳಿಲ್ಲ, ಇಂಥಾ ಪರಿಸ್ಥಿತಿ ಹಿಂದೆ ಕೂಡಾ ಬಂದಿತ್ತು. ನಮ್ಮಲ್ಲಿ ಇಂಥಾ ಕಾಲಕ್ಕೆ ದೇವರು ಅವತಾರ ತಾಳುತ್ತಾನೆ ಲೋಕೋದ್ಧಾರ ಮಾಡುತ್ತಾನೆ ಎಂದು ನಂಬಿದ್ದರು. ಆದರೆ ಈಗ ಅಂಥಾ ಒಬ್ಬ ಮನುಷ್ಯನ ಅಗತ್ಯ ಇದೆ, ಅವನು ನಮ್ಮೆಲ್ಲರ ಪ್ರತಿನಿಧಿಯಾಗಿ ಬರಬೇಕು. ದೇವರೆ ಆದರೂ ಮನುಷ್ಯನಾಗಿಯೇ ಬರಬೇಕಲ್ಲವೆ? ಯಾವ ವ್ಯವಸ್ಥೆಯೂ ಪರಿಪೂರ್ಣವಲ್ಲ. ಆದರ್ಶವೆನ್ನಿಸಿದ್ದ ವ್ಯವಸ್ಥೆಯ ನಾನಾ ಕೊರತೆಗಳು ಕ್ರಮೇಣ ಗೋಚರವಾಗುತ್ತವೆ. ಆಗ ಜನ ಬದಲಾವಣೆಯನ್ನು ಬಯಸಿ ಹಳೆಯದೇ ಆದರೂ ಹೊಸದಾಗಿ ಕಾಣುವ ಇನ್ನೊಂದು ವ್ಯವಸ್ಥೆಯನ್ನು ಬಯಸುತ್ತಾರೆ.

* ನಿಮ್ಮ ಕಾವ್ಯದ ಉದ್ದಕ್ಕೂ ಕಂಡು ಬರೋ ನಾಯಕ ಈ ಗುಣಗಳನ್ನು ಹೊಂದಿದ್ದಾನೆಯೆ ? ಅಥವಾ ನಿಮ್ಮ ಪುರುಷೋತ್ತಮನ ಕಲ್ಪನೆ ಇಂಥಾ ನಾಯಕದ್ದೇ ?

o ಕಲ್ಪನೆಯನ್ನೇನೋ ಇಟ್ಟುಕೊಂಡು ಬಂದಿದ್ದೇನೆ, ಏನು ಮಾಡೋದು ಬಂದಿಲ್ಲ. ನಾವೇ ಎಲ್ಲಾ ಆಗೋಕೆ ಸಾಧ್ಯವಿಲ್ಲ. ನಮ್ಮೆಲ್ಲರ ಪ್ರತಿನಿಧಿಯಾಗಿ ಅಂಥವನೊಬ್ಬ ಬರಬೇಕು. ಅವನ ಮಾತನ್ನ ನಾವು ಕೇಳಬೇಕು. ಗಾಂಧಿಯಂಥವ ನಾದರೂ ಆಗಬೇಕು. ಆದರೆ ಇವತ್ತಿಗೆ ಗಾಂಧಿ ಸಾಕಾಗೋದಿಲ್ಲ ಎನಿಸುತ್ತದೆ. ನಿಮ್ಮ ಮೇಲೆ ನಿತ್ಯವೂ ದೌರ್ಜನ್ಯ ನಡೆಯತೊಡಗಿ, ಕ್ರಿಸ್ತ ಹೇಳಿದ ಹಾಗೆ ಒಂದು ಕೆನ್ನೆಗೆ ಹೊಡೆದಾಗ ಮತ್ತೊಂದು ಕೆನ್ನೆ ತೋರಿಸಿದರೆ ಮತ್ತೊಂದು ಕೆನ್ನೆಗೂ ಹೊಡೆದು ಬೆನ್ನ ಮೇಲೂ ಒಂದು ಕೊಡುತ್ತಾರೆ. ನಿತ್ಯವೂ ಅಂಥಾ ದೌರ್ಜನ್ಯ ಸಹಿಸಿಕೊಳ್ಳಬೇಕೆ ? ದೌರ್ಜನ್ಯವನ್ನ ಪ್ರತಿಭಟಿಸಲೇ ಬೇಕು. ಆ ಕಾಲಕ್ಕೆ ಗಾಂಧಿಯಂಥವರ ನಾಯಕತ್ವ ನಮಗೆ ಸಾಕಾಗಿತ್ತು. ಬ್ರಿಟೀಷರಲ್ಲೂ ಸ್ವಲ್ಪ ನ್ಯಾಯ ಬುದ್ಧಿ ಇತ್ತು, ಕೊನೆಗೂ ನಾವು ಗೆಲ್ಲಲು ಸಾಧ್ಯವಾಯ್ತು. ಈ ಕಾಲದಲ್ಲಾದರೆ ಅಧಿಕಾರದಲ್ಲಿದ್ದವನು ಕೊಲೆ ಮಾಡಿದರೂ ಏನೂ ಮಾಡಕ್ಕಾಗಲ್ಲ.

* ನಮ್ಮ ದೇಶ ಒಂದು ರೀತಿಯ ಸಂಕ್ರಮಣ ಸ್ಥಿತಿಯಲ್ಲಿರೋದರಿಂದ, ಹಳೇ ಮೌಲ್ಯಗಳನ್ನು ಒಪ್ಪಿಕೊಳ್ಳಲಾಗದ ಹೊಸದರ ಅನ್ವೇಷಣೆ ಸಾಧ್ಯವಾಗದೇ ಇರೋದು ಕಂಡು ಬರುತ್ತೆ. ಈ ಸ್ಥಿತಿಯಲ್ಲಿ ಮೌಲ್ಯಗಳಿಗೆ ಬದ್ಧರಾದ ಒಂದು ಪೀಳಿಗೆಯನ್ನ ನಿರೀಕ್ಷಿಸುವುದು ಎಷ್ಟರ ಮಟ್ಟಿಗೆ ಸೂಕ್ತ ?

o ಆದರ್ಶವಾದಿ ಅನ್ನೋದಕ್ಕಿಂತಾ ವಾಸ್ತವವಾದಿಗಳ ಸಂಖ್ಯೆ ಜಾಸ್ತಿ ಯಾಗಬೇಕು. ಆಮೇಲೆ ಆದರ್ಶ, ನಾವು ಮೊದಲಿನಿಂದಲೂ ಭಾರಿ ಭಾರಿ ಘೋಷಣೆ ಗಳನ್ನು ಭಾಷಣಗಳನ್ನು ಮಾಡಿದೆವು. ಈಗಲೂ ಮಾಡೋಲ್ವೇ? ನಮ್ಮ ರಾಜಕೀಯಸ್ಥ ರೆಲ್ಲಾ ತುಂಬಾ ಚೆನ್ನಾಗಿ ಮಾತಾಡುತ್ತಾರೆ. (ವ್ಯಂಗ್ಯವಾಗಿ) ನಮ್ಮಲ್ಲಿ ಹಿಂದೆ ತ್ರಿಕರಣಶುದ್ಧಿ ಎನ್ನುತ್ತಿದ್ದರು. ಅದು ಉಳ್ಳಂಥಾ ಜನ ಬರಬೇಕು. ಮಾತಲ್ಲೇ ನಿದೆಯೊ ಅದೇ ಕೃತಿಯಲ್ಲಿ—ಇಂಥಾ ಜನ ಬರಬೇಕು, ಸಾಹಿತ್ಯ, ಕಾವ್ಯಕ್ಕೂ ಅನ್ವಯಿಸೋ ಮಾತಿದು. ಬರೇ ದೊಡ್ಡ ದೊಡ್ಡ ಮಾತಿನ ಶಬ್ದದ ಜನ ನಮ್ಮಲ್ಲಿ ಬಹಳ ಇದಾರೆ. ಅವರಿಗೆ ಅನುಭವಕ್ಕೆ ಬಂದಿರೋದೇ ಇಲ್ಲ. ಆದರೂ ಬರೀತಾರೆ. ದೊಡ್ಡ ದೊಡ್ಡ ಶಬ್ಧಗಳಿದ್ದರೆ ನಮ್ಮ ಜನ ಆದರ್ಶದ ಗುಂಗಿನಲ್ಲಿ ಎಲ್ಲವನ್ನು ಮರೀತಾರೆ. ಅದು ಹೋಗಬೇಕು. ಈ ಜನ ವಾಸ್ತವವಾದಿಗಳಾಗಬೇಕು. ಅನಂತರ ಆದರ್ಶ. ಇಲ್ಲಿ ಯಾವ ವ್ಯವಸ್ಥೆ ಬರುತ್ತೆ ಅನ್ನೋಕ್ಕಾಗಲ್ಲ. ಇಲ್ಲಿ ಯಾವ ವ್ಯವಸ್ಥೆಯೂ ಸ್ಥಿರವಾದ್ದಲ್ಲ. ಕಮ್ಯೂನಿಸಮ್ಮಿಗೆ ಯಾವ ಗತಿ ಬಂದಿದೆ ನೋಡಿ....

* ಸರ್ ಹಾಗಿದ್ದರೆ ರಷ್ಯದ ರಾಜಕೀಯ ಪತನವನ್ನು ನಾವು ಕಮ್ಯುನಿಸಮ್ಮಿನ ತತ್ವದ ಸೋಲು ಅಂತ ಪರಿಗಣಿಸಕ್ಕೆ ಹೇಗೆ ಸಾಧ್ಯ ?

o ಯಾಕೆಂದರೆ ಒಂದು ಅತಿ ಅದು. ಗಾಂಧಿ ಹೇಳಿದ ಅಹಿಂಸೆ, ಕಮ್ಯುನಿಸ್ಟರು ಹೇಳಿದ ಬಡತನ ಇಲ್ಲದ ಹಾಗೆ ಮಾಡುತ್ತೇವೆನ್ನುವ ಮಾತುಗಳೂ ಅತಿಯಾದದ್ದು. ಎಲ್ಲ ಜನಗಳೂ ಒಂದೇ ಎನ್ನುತ್ತಾ ಒಳ್ಳೆಯ ಮಾತುಗಳಲ್ಲೇ ಜನಗಳ ದಮನ ಮಾಡಲಾರಂಭಿಸಿದರು. ಅದು ಆಗಬಾರದು. ಇಲ್ಲೂ ಹಾಗೇ ಆಗುತ್ತಿದೆ. ಟ್ರೇಡ್ ಯೂನಿಯನ್‌ಗಳ ಹೆಸರಲ್ಲಿ ಅನೇಕ ದುರಾಚಾರ ನಡೆಯುತ್ತಿದೆ. ಇದು ಯಾವ ಅತಿಯೂ ನಡೆಯಲಾರದೆನ್ನುವುದು ತೋರಿಸುತ್ತದೆ. ಕಮ್ಯೂನಿಸಮ್ಮೂ ಮತ್ತೆ ಮುಂದೆ ಗ್ರಾಹ್ಯವೂ ಅನಂತರ ಅಗ್ರಾಹ್ಯವೂ ಆಗಬಹುದು.

* ಈ ರೀತಿಯ ಹಿಂಸೆ ಮತ್ತು ಶೋಷಣೆಗಳೂ ಬೇರೆ ಬೇರೆ ರಾಜ್ಯ ವ್ಯವಸ್ಥೆಗಳ ಹುಟ್ಟು ಮತ್ತು ಸ್ಥಾಪನೆಗಳ ಸಂದರ್ಭದಲ್ಲೂ ಕಂಡು ಬರುತ್ತದೆ. ಹಾಗಾದರೆ ಕಮ್ಯುನಿಸ್ಟರಿಗೆ ಮಾತ್ರ ಇದು ಹೇಗೆ ಅನ್ವಯಿಸೀತು ?

o ಇದು ಕಮ್ಯೂನಿಸಂಗೆ ಮಾತ್ರವಲ್ಲ ಎಲ್ಲ ವ್ಯವಸ್ಥೆಗೂ ಅನ್ವಯಿಸುವ ಮಾತು. ಹಾಗಾದರೆ ಅದೊಂದು ಅಮೂರ್ತ ಸ್ಥಿತಿಯಾಗುತ್ತೆ. ಅಮೂರ್ತ ಸ್ಥಿತಿಯಲ್ಲಿ ಎಲ್ಲವೂ ಸರಿಯೇ. ಮೂರ್ತವಾಗಿ ಬಂದಾಗ ಅದರ ದಿಕ್ಕು ತಿಳಿಯುತ್ತೆ. ಯಾವತ್ತೂ ಒಂದು ವ್ಯವಸ್ಥೆ ಪರಿಪೂರ್ಣ ಅಲ್ಲ. ಒಂದರ ಕೊನೆಯಾದ ನಂತರ ಮತ್ತೊಂದು ಬರುತ್ತೆ. ಕೊನೆಯ ಮಾತಾಗಿ ಇದನ್ನು ಕುರಿತು ಏನನ್ನೂ ಹೇಳಲು ಸಾಧ್ಯವಿಲ್ಲ. ಆ ರೀತಿ ಹೇಳಲೂ ಬಾರದು.

* ಗಾಂಧೀಜಿ ಧರ್ಮವನ್ನು ಕೇಂದ್ರವಾಗಿಟ್ಟುಕೊಂಡು, ರಾಮ ರಾಜ್ಯದ ಕಲ್ಪನೆಯಲ್ಲಿ ರಾಜಕೀಯ ಬದಲಾವಣೆಗೆ ಹೊರಟರು. ಹಾಗೇ ಇವತ್ತಿಗೆ ಧರ್ಮವನ್ನು ಕೇಂದ್ರವಾಗಿಟ್ಟುಕೊಂಡು ನಮ್ಮ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಲು ಸಾಧ್ಯವೆ ?

o ಹಾಗೆ ಹೇಳೋದು ಸಾಧ್ಯವಿಲ್ಲ. ಧರ್ಮದ ಕಲ್ಪನೆ ಏನು ? ಯಾವುದು ಧರ್ಮ ಎನ್ನೋದು ಮುಖ್ಯ. ಧರ್ಮದ ಹೆಸರಲ್ಲಿ ಅನೇಕರು ಸೋಮಾರಿಗಳೂ ವಂಚಕರೂ ಆಗುತ್ತಾರೆ. ಧರ್ಮದ ನಿಜವಾದ ಕಲ್ಪನೆ ಏನಿದೆ ? ಒಬ್ಬರಿಗೊಬ್ಬರು ಸರಿಯಾಗಿದ್ದು ಸಾಮಾಜಿಕವಾಗಿ ಸರಿಯಾಗಿ ಬದುಕೋದು ಧರ್ಮ. "ಧಾರಣಾತ್ ಧರ್ಮ ಇತ್ಯಾಹುಃ", ಎಲ್ಲರನ್ನೂ ಕೂಡಿಸುವಂಥಾದ್ದು ಧರ್ಮ. ಕೇವಲ ಪೂಜೆ ಭಜನೆಗಳು ಧರ್ಮ ಆಗಲಾರವು—ಅದೂ ಕಂದಾಚಾರ, ಪುನರುಚ್ಚಾರರ ವಾಗ್ವಿಲಾಸ.

* ಹಾಗಿದ್ದರೆ ಒಂದು ಧರ್ಮದ ಜನ ತಮ್ಮ ಧರ್ಮವನ್ನು ಕೇಂದ್ರವಾಗಿಟ್ಟುಕೊಂಡು ಅದರ ಒಳಿತಿಗಾಗಿ ಸಂಘಟಿತರಾಗೋದು ಎಷ್ಟು ಸೂಕ್ತ ?

o ವಿಭಜನೆ ಮಾಡುವಂಥಾದ್ದು ಧರ್ಮವೇ ಅಲ್ಲ. ಅಂಥಾ ಧರ್ಮ ನಾಶವಾಗಬೇಕು. ನಮ್ಮದೇ ಬೇರೆ, ನಿಜವಾದದ್ದು. ಇತರದ್ದು ಅಲ್ಲ. ನಮ್ಮ ದೇವರು ಮಾತ್ರವೇ ದೇವರು ಮುಂತಾಗಿ ಹೇಳೋದು ನಮ್ಮ ಆಚರಣೆಗಳನ್ನೇ ಅನುಸರಿಸಬೇಕೆನ್ನುವುದು ಸರಿಯಾದ ಧರ್ಮ ಅಲ್ಲ. ಉದಾಹರಣೆಗೆ ಕ್ರಿಶ್ಚಿಯನ್ ಧರ್ಮ ಆಧುನಿಕ ಕಾಲದಲ್ಲ ಅನೇಕ ಬದಲಾವಣೆ ವಿರೋಧಗಳಿಗೆ ಒಳಗಾಗಬೇಕಾಗಿ ಬಂದಿತು. ಭಾರತೀಯ ಧರ್ಮದ ಕಲ್ಪನೆಯಿದೆಯಲ್ಲಾ ಅದು ಸರಿಯಾದದ್ದು. ತಾತ್ವಿಕವಾಗಿ ಆಚರಣೆಗೂ ತತ್ವಕ್ಕೂ ಸಂಬಂಧ ತಪ್ಪಿದರೆ ಸಂಕಷ್ಟ.

* ನೀವು ಕ್ರಿಶ್ಚಿಯನ್ ಧರ್ಮದಲ್ಲಿ ಗುರುತಿಸಿದ ಹಾಗೇ ಭಾರತೀಯ (ಹಿಂದೂ) ಧರ್ಮದಲ್ಲೂ ಅನೇಕ ಮಿತಿ ದೋಷಗಳಿವೆಯಲ್ಲ ? ಜಾತಿ ಸಮಸ್ಯೆ ಮನುಷ್ಯನನ್ನು ಕೀಳಾಗಿ ಕಾಣುವ ಪ್ರವೃತ್ತಿ ಮುಂತಾವವು ಅನೇಕ ಇವೆಯಲ್ಲ ?

o ಅದು ತಪ್ಪು. ನಮ್ಮ ಧರ್ಮದ ಮೂಲದಲ್ಲಿ ಆ ರೀತಿ ಇಲ್ಲ. ಅದೆಲ್ಲಾ ಇರಬೇಕು ಅಂತ ಅದು ಹೇಳೋದಿಲ್ಲ. ಇಂದಿನ ಧರ್ಮದ ಕಂದಾಚಾರ ಗಳನ್ನು ನಾವು ನೀವು ವಿರೋಧಿಸಿಯೂ ಬದುಕಲು ಸಾಧ್ಯ.

* ಹಾಗಿದ್ದರೆ ಇವತ್ತು ಧರ್ಮವನ್ನು ಮೂಲವಾಗಿಟ್ಟುಕೊಂಡು ಹೊರಟ ರಾಜಕೀಯ ಪ್ರಕ್ರಿಯೆಗಳು ಎಷ್ಟರ ಮಟ್ಟಿಗೆ ಸೂಕ್ತವಾಗುತ್ತದೆ ? ಬಿ.ಜೆ.ಪಿ. ಮುಂತಾದ ಅನೇಕ ಸಂಘಟನೆಗಳ ಮೂಲ ಉದ್ದೇಶ ಧರ್ಮದ ಪುನರುತ್ಥಾನದ ಹಿನ್ನೆಲೆ ಹೊಂದಿದೆಯಲ್ಲ ?

o ಇದನ್ನು ತಾತ್ಕಾಲಿಕವಾಗಿ ಮತ್ತು ಸಾರ್ವಕಾಲಿಕವಾಗಿ ಯೋಚನೆ ಮಾಡಬೇಕು. ಸಾರ್ವಕಾಲಿಕವಾಗಿ ಯೋಚಿಸಿದಲ್ಲಿ ಇವು ಸರಿಯಲ್ಲ, ತಾತ್ಕಾಲಿಕವಾಗಿ ಯೋಚಿಸಿದರೆ ಅನೇಕ ವರ್ಷಗಳಿಂದ ಒಂದು ಧರ್ಮದ ಜನ ಮತ್ತೊಂದು ಧರ್ಮ ದವರ ಮೇಲೆ ದೌರ್ಜನ್ಯ ನಡೆಸುವುದನ್ನ ಸಹಿಸುವುದು ತಪ್ಪಾಗುತ್ತದೆ. ಅದಕ್ಕೆ ವಿರುದ್ಧವಾದದ್ದು ಹುಟ್ಟಿಕೊಳ್ಳುತ್ತದೆ. ಅದು ತಾತ್ಕಾಲಿಕವಾಗಿ ಕ್ಷಮ್ಯ, ಸಾರ್ವ ಕಾಲಿಕವಾಗಿ ತಪ್ಪು. ಸಾರ್ವಕಾಲಿಕವಾದದ್ದನ್ನು ಅದರಲ್ಲೇ ಹುಡುಕಿತೆಗೆಯಬೇಕು.

* ಈಗಿನ ಮನುಷ್ಯ ನಿಮಗೆ ಹೇಗೆ ಕಾಣುತ್ತಾನೆ ? ಹೆಚ್ಚು ನಾಗರೀಕ ವಾಗಿ ಪ್ರಗತಿಯತ್ತ ಸಾಗುತ್ತಿದ್ದಾನೋ ಅಥವಾ ಅವನ ಅಧಃಪತನವಾಗುತ್ತಿದೆ ಎನ್ನಿಸುತ್ತಿದೆಯೆ ?

o ಹಿಂದೆ ಒಂಥರಾ ಶಾಂತಿ ಇತ್ತು ಸಮಾಧಾನ ಇತ್ತು ಯಾಕೇಂದ್ರೆ ಆಸೆ

ಗಳು ಅಪರಿಮಿತವಾಗಿ ಇರಲಿಲ್ಲ, ನಾನು ಚಿಕ್ಕವನಾಗಿದ್ದಾಗ ಕಾಣುತ್ತಿದ್ದ ಸಾಮರಸ್ಯ ಈಗ ಕಾಣುವುದಿಲ್ಲ, ಈಗ ವ್ಯಕ್ತಿತ್ವ ಮತ್ತು ವ್ಯಕ್ತಿ ಹಿತ ಬಹಳ ಮುಖ್ಯವಾಗುತ್ತಿದೆ.

* ನೀವು ಸಾಹಿತ್ಯದಲ್ಲಿ ಶ್ರೇಷ್ಠತೆ ಕುರಿತು ಅನೇಕ ಸಲ ಹೇಳಿದ್ದೀರಿ ಹಾಗಿದ್ದರೆ ಈ ಶ್ರೇಷ್ಠತೆಯ ಕಲ್ಪನೆಯೇ ಕಾಲಕಾಲಕ್ಕೂ ಬದಲಾಗೋದಲ್ವೇ ? ಪ್ರತಿಯೊಬ್ಬ Great Writer ಹುಟ್ಟಿದಾಗಲೂ ಅವನು ತನ್ನ ಬರವಣಿಗೆಯ ಮೂಲಕ ಶ್ರೇಷ್ಠತೆಗೆ ಹೊಸ ವ್ಯಾಖ್ಯೆ ಕೊಡಬಹುದಲ್ಲವೆ ?

o ಸಾಹಿತ್ಯದಲ್ಲಿ ಮುಖ್ಯವಾಗಿ ಅದನ್ನ ಓದಿದ ತಕ್ಷಣ ಇವನು ಬರೆದದ್ದು ಅನ್ನಿಸಬೇಕು, ಅವನ ವ್ಯಕ್ತಿತ್ವ ಅಲ್ಲಿ ಪಡಿಮೂಡಬೇಕು. ಎರಡನೇದಾಗಿ ಆತ ತನ್ನ ಮನಸ್ಸಿನಲ್ಲಿರೋದನ್ನೇ ಅಲ್ಲಿ ಹೇಳುತ್ತಾ ಇದ್ದಾನೆ ಅಂತ ಅನ್ನಿಸಬೇಕು, ಅವನು ತನ್ನ ಮನಸ್ಸಿನಲ್ಲಿ ಇಲ್ಲದೇ ಇರೋದನ್ನ ಎಂದೂ ಹೇಳಲಾರ ಅನ್ನಿಸಬೇಕು. ಹೇಳೋ ಶಕ್ತಿ ಇರಬೇಕು, ಭಾಷೆ ಮುಂತಾದ ತಂತ್ರದ ಬಳಕೆ ಸಿದ್ಧಿಸಿರಬೇಕು.

* ಇವತ್ತಿನ ನಮ್ಮ ಕನ್ನಡ ಸಾಹಿತ್ಯ ಕುರಿತು ನಿಮಗೇನನ್ನಿಸುತ್ತೆ ?

o ಇತ್ತೀಚೆಗೆ ಬಹಳ ಅಧಃಪತನಕ್ಕೆ ಬರುತ್ತಿದೆ. ಬರೆಯೋರ ಸಂಖ್ಯೆ ಜಾಸ್ತಿಯಾಗಿದೆ ಸರಿ, ಆದರೆ ಚೆನ್ನಾಗಿ ಬರೆಯೋರ ಸಂಖ್ಯೆ ಕಡಿಮೆ ಆಗಿದೆ, ಯಾಕೇಂದ್ರೆ ಬಹುಶಃ ಪ್ರಜಾತಂತ್ರ ಹೇಗೆ ವಿಫಲವಾಗುತ್ತಿದೆಯೋ ಹಾಗೆ ಸಾಹಿತ್ಯ ಕೂಡಾ ಕೆಳಕೆಳಕ್ಕೆ ಇಳೀತಾ ಇದೆ.

* ಇತ್ತೀಚೆಗೆ ಬೇರೆ ಬೇರೆ ವರ್ಗಗಳ ಲೇಖಕರು ತಮ್ಮ ಅನುಭವಕ್ಕೆ ಮಾತಿನ ರೂಪಕೊಡಲು ಆರಂಭಿಸಿದ್ದಾರೆ ಒಂದಷ್ಟು ದಿನಗಳು ಹಿಂದಿನ ಲೇಖಕರು. ಬರೆದ ಹಾಗೆ ಬರೆಯಲು ಸಾಧ್ಯವಾಗದೇ ಹೋದರೂ ಇವರು ಶ್ರೇಷ್ಠ ಸಾಹಿತ್ಯದ ಕಲ್ಪನೆಗೇ ಹೊಸ ವ್ಯಾಖ್ಯೆ ಕೊಡಲು ಸಾಧ್ಯ ಅಲ್ಲವೆ ? ಉದಾಹರಣೆಗೆ ದೇವನೂರು ಮಹಾದೇವರ ಕುಸುಮಬಾಲೆ ತಗೊಳ್ಳಿ ಈ ಹಿಂದೆ ನೀವೂ ಕವಿತೆಗಳನ್ನ ಬರೆದಾಗ ಇದೇಥರ ಅರ್ಥವಾಗದ್ದು ಎನ್ನೊ ಆರೋಪಕ್ಕೆ ಒಳಗಾಗಿತ್ತು.

o ನಿಜ ಈ ರೀತಿ ಸಾಧ್ಯವಿದೆ ಆದರೆ ನಾನು ಹಿಂದೆ ಹೇಳಿದ ಹಾಗೆ ದೇವನೂರು ಮಹಾದೇವ ನಿಜವಾಗಿ ತನ್ನ ಮನಸ್ಸಿಲ್ಲಿರೋದನ್ನ ಬರೀತಾನೆ, ತನ್ನ ವ್ಯಕ್ತಿತ್ವವನ್ನು ತನ್ನ ಬರಹದ ಮೂಲಕ ತೋರಿಸುತ್ತಾನೆ, ತನಗೆ ಪ್ರಿಯವಾದದ್ದನ್ನ ಸಾಮಾಜಿಕವಾಗಿ ನ್ಯಾಯ ಅನ್ನಿಸಿದ್ದನ್ನ ಹೇಳುತ್ತಾನೆ ಒಪ್ಪಬೇಕಾದ್ದು ಆದರೆ ಅಂಥೊರ ಸಂಖ್ಯೆ ಬಹಳ ಕಡಿಮೆ.

* ಹಾಗಿದ್ದರೆ ನೀವು ಹೇಳಿದ ಸಾಹಿತ್ಯ ಅಧಃಪತನಕ್ಕೆ ಇಳಿಯುತ್ತಿದೆ ಎನ್ನುವ ಮಾತನ್ನು ಒಪ್ಪಲು ಸಾಧ್ಯವಿಲ್ಲ.

o ಅಲ್ಲ್ರೀ, ದಶಕಂಠನೂ ಹಾಡಲು ಪ್ರಾರಂಭಿಸಿದರೆ ಏನು ಮಾಡೋದು ? ಇದು ಒಂದ ಕಲೆ, ಇದರ ಬಳಕೆ ಸರಿಯಾಗಿ ಸಾಧ್ಯವಾಗಬೇಕು. ಸರಿಯಾದ ಸಿದ್ಧತೆ, ಶಕ್ತಿಬೇಕು ಅಂಥೊರ ಸಂಖ್ಯೆ ಬಹಳಾ ಕಡಿಮೆ. ಅಲ್ಲಲ್ಲಿ ಕೆಲವರು ಚೆನ್ನಾಗಿ ಬರೆಯುತ್ತಾರೆ. ಅವರು ಬರೆಯುಬೇಕು. ಬರೆದದ್ದು ಗಟ್ಟಿಯಾದರೆ ಹೊಸಸೃಷ್ಟಿ. ಇದೂ ಜೀವನದ ಹಾಗೆ.

* ಸಾಹಿತ್ಯದಲ್ಲಿ ಕಾವ್ಯವನ್ನ ಬಿಟ್ಟು ಇತರೆ ಪ್ರಕಾರಗಳಲ್ಲಿ ಉಪಭಾಷೆಯ ಬಳಕೆ ಎಷ್ಟು ಸೂಕ್ತ ?

o ಉಪಭಾಷೆ ಎಷ್ಟು ದೊಡ್ಡದು ಅಂತ ನೋಡಿಕೊಳ್ಳಬೇಕಾಗುತ್ತೆ, ಹೆಚ್ಚು ಜನಕ್ಕೆ ತಲುಪಬೇಕೆಂದು ಬರೆಯೋದು, ನಾನು ನಮ್ಮೂರಿನ ಭಾಷೆಯಲ್ಲಿ ಬರೆದರೆ ಹೆಚ್ಚು ಜನಕ್ಕೆ ಅರ್ಥವಾಗೋಲ್ಲ, ಹೆಚ್ಚು ಜನಗಳಿಗೆ ಅನ್ವಯಿಸೋ ಹಾಗೆ ಬರೀಬೇಕಲ್ವೇ ಉಪಭಾಷೆಯ ಬಳಕೆಯಿಂದ ಕೆಲವರಿಗೆ ಸಂತೋಷವಾಗತ್ತೆ, ಅದನ್ನ ಸ್ವಲ್ಪಸ್ವಲ್ಪ ಬಳಸಲೂ ಬಹುದು.

* ನವ್ಯ ಲೇಖಕರು ಸ್ತ್ರೀಯನ್ನ ಕಾಮದ ವಸ್ತುವಾಗಿ ಪರಿಗಣಿಸಿದರು ಅನ್ನೋ ಆರೋಪ ಇದೆ ಇವತ್ತು ಸ್ತ್ರೀವಾದಿ ಪ್ರಜ್ಞೆಹೊತ್ತ ಅನೇಕ ಲೇಖಕಿಯರು ಬರೆಯುತ್ತಿದ್ದಾರೆ. ಈ ಹಿನ್ನೆಲೆಯಲ್ಲಿ ಪ್ರಮುಖ ನವ್ಯ ಲೇಖಕರಾಗಿ ನಿಮಗೇ ನನ್ನಿಸುತ್ತದೆ.

o ಇದೊಂದು ಒಳ್ಳೆಯ ಬೆಳವಣಿಗೆಯೋ ಏನೋ ಗೊತ್ತಿಲ್ಲ, ಕೊನೆಗೆ ನಮ್ಮ ಹೆಂಗಸರೂ ಯುರೋಪಿಯನ್ನರ ಹಾಗಾಗಬೇಕೆ ? ಸ್ವಲ್ಪ ನಿಯಮ ನೀತಿ ಬಿಡದ ಹಾಗೆ ನಡಕೋಬೇಕು, ಅವರು ಮುಂದೆ ಬರಬೇಕಾದ್ದು ನಿಜ, ಇದೊಂದು ಒಳ್ಳೆ ಬೆಳವಣಿಗೆ ಅನ್ನಿಸುತ್ತೆ. ಅವರು ನಮ್ಮ ಬದುಕಿಗೆ, ನಮ್ಮ ಪರಂಪರೆಗೆ ಸೇರಿದವರು. ಹಾಗೆ ಬರೆಯುಬೇಕು. ಪಾಶ್ಚಾತ್ಯರ ರೀತಿ ಉಡುಪು, ಆಚರಣೆಯ ಅನುಕರಣೆಯಿಂದ ಹೆಂಗಸಾಗಲೀ ಗಂಡಸಾಗಲಿ ಉತ್ತಮ ಲೇಖಕ ಆಗುವುದು ಸಾಧ್ಯವಿಲ್ಲ ಹಸನಾಗಬೇಕು, ಕೇವಲ ವಿಕಾರವಲ್ಲ ಕೇವಲ ಅನುಕೃತ ಅಲ್ಲ.

# ಮೋಹನ ಮುರಲಿ

ಯಾವ ಮೋಹನಮುರಲಿ ಕರೆಯಿತು ದೂರ ತೀರಕೆ ನಿನ್ನನು ?
ಯಾವ ಬೃಂದಾವನವು ಸೆಳೆಯಿತು ನಿನ್ನ ಮಣ್ಣಿನ ಕಣ್ಣನು ?

ಹೂವುಹಾಸಿಗೆ, ಚಂದ್ರ, ಚಂದನ, ಬಾಹುಬಂಧನ, ಚುಂಬನ ;
ಬಯಕೆತೋಟದ ಬೇಲಿಯೊಳಗೆ ಕರಣಗಣದೀ ರಿಂಗಣ ;

ಒಲಿದ ಮಿದುವೆದೆ, ರಕ್ತಮಾಂಸದ ಬಿಸಿದುಸೋಂಕಿನ ಪಂಜರ ;
ಇಷ್ಟೆ ಸಾಕೆಂದಿದ್ದೆಯಲ್ಲೋ ! ಇಂದು ಏನಿದು ಬೇಸರ ?

ಏನಿದೇನಿದು ಹೊರಳುಗಣ್ಣಿನ ತೇಲುನೋಟದ ಸೂಚನೆ ?
ಯಾವ ಸುಮಧುರ ಯಾತನೆ ? ಯಾವ ದಿವ್ಯದ ಯಾಚನೆ ?

ಮರದೊಳಡಗಿದ ಬೆಂಕಿಯಂತೆ ಎಲ್ಲೊ ಮಲಗಿದೆ ಬೇಸರ ;
ಏನೊ ತೀಡಲು ಏನೊ ತಾಗಲು ಹೊತ್ತಿ ಉರಿವುದು ಕಾತರ.

ಸಪ್ತಸಾಗರದಾಚೆಯೆಲ್ಲೋ ಸುಪ್ತ ಸಾಗರ ಕಾದಿದೆ,
ಮೊಳೆಯದಲೆಗಳ ಮೂಕ ಮರ್ಮರ ಇಂದು ಇಲ್ಲಿಗು ಹಾಯಿತೆ ?

ವಿವಶವಾಯಿತು ಪ್ರಾಣ ; ಹಾ ! ಪರವಶವು ನಿನ್ನೀ ಚೇತನ ;
ಇರುವುದೆಲ್ಲವ ಬಿಟ್ಟು ಇರದುದರೆಡೆಗೆ ತುಡಿವುದೆ ಜೀವನ ?

ಯಾವ ಮೋಹನಮುರಲಿ ಕರೆಯಿತು ಇದ್ದಕಿದ್ದೊಲೆ ನಿನ್ನನು ?
ಯಾವ ಬೃಂದಾವನವು ಚಾಚಿತು ತನ್ನ ಮಿಂಚಿನ ಕೈಯನು ?

---

ಅಡಿಗರ ಈ ಜನಪ್ರಿಯ ಕವಿತೆ ನಮ್ಮ ಓದುಗರ ಸಂಗ್ರಹಕ್ಕಾಗಿ
(ಕಟ್ಟುವೆವು ನಾವು ಸಂಕಲನದಿಂದ)

# ವ್ಯಕ್ತಿ ಹಾಗೂ ಸಮೂಹಗಳೊಡನೆ ಪರಿಸರ ಚಳುವಳಿಗಳು

–ವಿ. ಜಗನಾಥ್
ಪರಿಸರ ಇಂಜಿನಿಯರ್, ಭಾರತೀಯ ಬಾಹ್ಯಾಕಾಶ
ಸಂಶೋಧನಾ ಸಂಸ್ಥೆ, ಬೆಂಗಳೂರು

ಪರಿಸರ ಸಂರಕ್ಷಣೆ ಮೂಲತಃ ಮಾನವ ಕೇಂದ್ರಿತ. ಜೀವಿ ಪರಿಸ್ಥಿತಿಯ ನಿಯಮಗಳಲ್ಲಿ ಪರಸ್ಪರ ಅವಲಂಬನೆ ಮತ್ತು ಪರಸ್ಪರ ಹೊಂದಾಣಿಕೆ ಅತ್ಯಂತ ಮುಖ್ಯ ವಾದ ಅಂಶಗಳು. ಸಾಮಾನ್ಯರ ತಿಳುವಳಿಕೆಗೆ ಮೇಲ್ನೋಟಕ್ಕೆ ನಿಲುಕಲಾರದಂತಹ ಪರಿಸರದ ಸಂಕೀರ್ಣ ಪ್ರತಿಯೊಬ್ಬರಿಗೂ ಅನುಭವವಾಗಿಯೇ ಇರುತ್ತದೆ. ಜೀವಪರಿಸ್ಥಿತಿ ವೃತ್ತಿ (Ecological niche) ಬದಲಾದಂತೆ ಆದಿಮಾನವನಿಂದ ಆಧುನಿಕ ಮಾನವನವರೆಗೆ ಪರಿಸರದೊಡನೆ ಮಾನವನ ನಿರಂತರ ಬದಲಾಗುತ್ತಿರುವ ಸಂಬಂಧ ಗಳನ್ನು ಗುರುತಿಸಬಹುದು. ಅದರಲ್ಲಿ ಬಹು ಮುಖ್ಯವಾದವುಗಳು ಮಾನವನ 'ಒಳ ಪರಿಸರ" ಹಾಗೂ 'ಹೊರ ಪರಿಸರ'

ಯಾವುದೇ ವೃತ್ತಿಯಲ್ಲಿ (ಕೃಷಿಕ, ಕಾರ್ಮಿಕ ಹಾಗೂ ಇನ್ನಿತರ) ಪ್ರತಿಯೋರ್ವ ರಿಗೂ ವ್ಯಕ್ತಿಯ ಒಳಗಿನ ಒಳ ಪರಿಸರದ ಗುಣಾತ್ಮಕ ವಿಶಿಷ್ಟ ಪರಿಸ್ಥಿತಿಗಳು ಇರುತ್ತವೆ. ಇವುಗಳಲ್ಲಿ ಮುಖ್ಯವಾದುದು ವ್ಯಕ್ತಿಯ ನಂಬಿಕೆ, ಮೌಲ್ಯ, ಜೀವನದ ಕ್ರಮಗಳು ಹಾಗೂ ನೀಡುವ ಪ್ರಾಮುಖ್ಯತೆಗಳು. ಯಾವುದೇ ಕಾಲದಲ್ಲಿ ಆಗಲಿ, ಸಮಾಜದಲ್ಲಿ ಆಗಲಿ, ವ್ಯಕ್ತಿ ಹಾಗೂ ಸಮೂಹಗಳ ಪರಿಸರ ಒಡನಾಟದಲ್ಲಿ ಒಳಪರಿಸರದಲ್ಲಿನ ವಿವಿಧ ಸಮಸ್ಯೆಗಳು ಹೊರ ಪರಿಸರದಲ್ಲಿ ಮೂರ್ತ ರೂಪ ಪಡೆದುಕೊಂಡಿರುತ್ತದೆ. ನಮ್ಮ ಬದುಕಿನಲ್ಲಿ ಇರುವ ಜಟಿಲತೆಯನ್ನು ತಾತ್ವಿಕವಾಗಿ ಅವಲೋಕನ ಮಾಡಿದಾಗ ಇದು ಸ್ಪಷ್ಟವಾಗಿ ಕಂಡು ಬರುತ್ತದೆ.

ಇತ್ತೀಚಿನ ದಿನಗಳಲ್ಲಿ ಹೆಚ್ಚು ಪ್ರಚಾರವಾಗುತ್ತಿರುವ ಪರಿಸರ ಕಾಳಜಿ ಹಾಗೂ ಒಲವುಗಳಿಗೆ ವ್ಯಕ್ತಿ ಮಟ್ಟದಲ್ಲಿ ಹಾಗೂ ಸಮೂಹ ರೂಪಗಳಲ್ಲಿ ಸಾಕಷ್ಟು ಅರಿವು, ಹಾಗೂ ನೈಪುಣ್ಯದ ಜೊತೆಗೆ ಸ್ಪಷ್ಟ ಮನೋಭಾವ ಹಾಗೂ ನಡವಳಿಕೆಗಳು ಅತ್ಯಂತ

ಅವಶ್ಯಕ. ಕೇವಲ ಪರಿಸರದ ಬಗ್ಗೆ ಮಾತನಾಡಿ ಎಲ್ಲರ ಒಳಿತಿಗಾಗಿ ಧ್ವನಿ ಎತ್ತುವುದು ಮೀರಿ ಮೂಲತಃ ಪರಿಸರ ಸ್ನೇಹಮಯ ಬದುಕನ್ನು ಉಳಿಸಿಕೊಳ್ಳುವುದು ನಿರ್ಣಾಯಕ ಅಂಶವಾಗುವ ಪರಿಸ್ಥಿತಿ ಈಗ ವ್ಯಕ್ತಿಗಳಿಗೆ ಸವಾಲಾಗಿ ಬಂದು ನಿಂತಿದೆ.

ವಿಜ್ಞಾನ ಮತ್ತು ತಂತ್ರಜ್ಞಾನದ ವಿವಿಧ ಪ್ರಯೋಜನವನ್ನು ಪಡೆಯುತ್ತಲೇ ಮಾನವನ ವೈಜ್ಞಾನಿಕ ಮನೋಭಾವ ಸೂಕ್ತವಾಗಿ ಬದಲಾಗುತ್ತಿದೆಯೋ ? ಎಂಬ ಪ್ರಶ್ನೆಗೆ ಪರಿಸರ ಪ್ರೀತಿಸಲು ಬಯಸುವ ನಾವುಗಳು ಮೊದಲು ಉತ್ತರಿಸಬೇಕಾಗುತ್ತದೆ. ವ್ಯಕ್ತಿ ಪ್ರತಿಷ್ಠೆ, ಅಹಂಕಾರ, ಅತಿ ಸ್ವಾರ್ಥ ಮತ್ತಿತರ ಅಂಶಗಳು ಜೀವ ಪರಿಸ್ಥಿತಿಯ ಮೌಲ್ಯಗಳಿಗೆ ನಿಲುಕಲಾರದ ಕ್ಷುಲ್ಲಕ ಅಂಶಗಳು. ಕ್ರಿಯಾತ್ಮಕವಾಗಿ ಉಳಿಯಲಾರದ ಅರಿವುಳ್ಳ ಮನಸ್ಸು ಕೂಡಾ ಒಂದು ಅಪಾಯಕಾರಿ ಪರಿಸ್ಥಿತಿಯನ್ನು ಸೃಷ್ಟಿಸಿ ವೈಜ್ಞಾನಿಕ ಮನೋಭಾವಕ್ಕೆ ವಿರೋಧಾಭಾಸವಾಗಿ ಉಳಿದುಕೊಳ್ಳುವ ಸಾಧ್ಯತೆ ಬಹುಶಃ ಪರಿಸರದ ದೃಷ್ಟಿಯಿಂದ ಅತ್ಯಂತ ಹಾನಿಕಾರಕ. ಇಂತಹ ಪರಿಸ್ಥಿತಿಯಿಂದಲೇ ಹೊಮ್ಮಿರುವುದು 'ಪರಿಸರ ಅವಶ್ಯಕತೆ' ಇದು ಅಕ್ಷರತೆಯುಳ್ಳ ಜನರಲ್ಲಿ ಹೇರಳವಾಗಿ ಕಾಣಬರುತ್ತದೆ. ನಮ್ಮ ಮೌಲ್ಯ, ನಂಬಿಕೆ, ಪ್ರಾಮುಖ್ಯತೆಗಳು, ಅಂತಸ್ತು, ಆಡಂಬರ, ಬಳಸುವ ಶಕ್ತಿ ಹಾಗೂ ವಸ್ತುಗಳ ಒಂದು ಆಯವ್ಯಯ ಮಾಡಿದಾಗ ಪರಿಸರಕ್ಕೆ ನಾವು ಅದೆಷ್ಟು ಸ್ನೇಹಮಯಿಗಳಾಗಿದ್ದೇವೆ ಎಂಬ ನಿಜಸ್ಥಿತಿ ಹೊರಬರುತ್ತದೆ. ತಾತ್ವಿಕತೆ (ಫಿಲಾಸಫಿ) ಯನ್ನು ಮನಸ್ಸು ಮತ್ತು ವಸ್ತುವಿನ ನಡುವಿನ ಸಂಬಂಧವೆಂದು ಹೇಳಬಹುದು. ಹೀಗಾಗಿ ಇಂದಿನ ಮಾನವ ಅತ್ಯಂತ ಸುಂದರವಾದ ವಿನ್ಯಾಸಗಳನ್ನು ರೂಪಿಸಬಲ್ಲ, ಜನಕಲ್ಯಾಣಕ್ಕೆ ವಿಜ್ಞಾನ ಮತ್ತು ತಂತ್ರಜ್ಞಾನವನ್ನು ಬೆಳೆಸಬಲ್ಲ–ಇದು ಆರೋಗ್ಯಕರ ಬದಲಾವಣೆ. ಹಾಗೆಯೇ ಅದೇ ಮಾನವ ಸಮೂಹದ ಸಾವಿಗೆ ಕಾರಣವಾಗುವ ಅಸ್ತ್ರಗಳನ್ನು, ಸಾಗರದ ಜಲಚರಗಳನ್ನು ನಾಶ ಮಾಡಬಲ್ಲ ರಸಾಯನಿಕಗಳನ್ನು ಜೀವಪೋಷಕ, ಗಾಳಿ, ನೀರು, ನೆಲ, ಕಡಲ ಜೀವರಾಶಿಯನ್ನು ತನ್ನ ಸ್ವಾರ್ಥಕ್ಕೆ ಅಧಿಕಾರ ದಾಹಕ್ಕೆ ನಾಶಮಾಡಬಲ್ಲ. ಕೈಗಾರಿಕೆ ಮಾಲಿನ್ಯ ಹಾಗೂ ಕೃಷಿ ವಿಧಾನಗಳನ್ನು ಮಾಡಬಲ್ಲ. ಇದು ಅನಾರೋಗ್ಯಕರ ಬದಲಾವಣೆ.

ಇದೇ ಮಾನವನ ಇತಿಹಾಸದಲ್ಲಿ ಕಳೆದೆರಡು ಶತಮಾನದಿಂದೀಚೆಗೆ ಸಾಮಾಜಿಕ ವಿಕಸನದಲ್ಲಿ ವ್ಯಕ್ತಿಯ ಸ್ವಾತಂತ್ರ್ಯ, ಪ್ರಜಾಪ್ರಭುತ್ವ ಹಾಗೂ ವ್ಯಕ್ತಿಯ ಬೆಳವಣಿಗೆಗೆ ಪೋಷಕವಾದ ಅಂಶಗಳನ್ನು ಗುರುತಿಸಿದ್ದು ಕಂಡುಬರುತ್ತದೆ. ಹಾಗೆಯೇ ಸಾಮಾಜಿಕ ಜವಾಬ್ದಾರಿಯನ್ನು ಕಂಡುಕೊಂಡು ವ್ಯಕ್ತಿಯ ಬದುಕಿಗೊಂದು ನೀತಿ ಸಂಹಿತೆ ಪರಿಸರ ಪೂರಕ ಮೌಲ್ಯಗಳನ್ನು ಬೇರೆ ದಾರಿಯಿಲ್ಲದೆ ಹುಡುಕಬೇಕಾದ ಪರಿಸ್ಥಿತಿ ಈಗ ಬಂದಿದೆ. ನಮಗಿರುವುದು ಒಂದೇ ಭೂಮಿ, ನಮೆಲ್ಲರ ಜೀವ ಪೋಷಕ ಪರಿಸ್ಥಿತಿ ಮಿತಿಯಾಗಿದ್ದು

ಇದನ್ನು ಸೂಕ್ತವಾಗಿ ಬಳಸುವುದು ಹಾಗೂ ಉಳಿಸಿಕೊಳ್ಳಬಹುದಾದ ಅಭಿವೃದ್ಧಿ (ಸಸ್‌ಟೇನಬಲ್ ಡೆವಲಪ್‌ಮೆಂಟ್) ಅತಿ ಮುಖ್ಯವಾಗಿದೆ. ಈ ಹಿನ್ನೆಲೆಯಲ್ಲಿ ವ್ಯಕ್ತಿಯ ಜೀವನದ ಸೂಕ್ಷ್ಮ ಸ್ಥರಗಳಲ್ಲಿ ವ್ಯಕ್ತಿಯ ಸರ್ವಾಂಗೀಣ ಬೆಳವಣಿಗೆಗೆ ಪೂರಕವಾಗುವ ಹಾಗೂ ಪರಿಸರವನ್ನು ಉಳಿಸುವ ಜೀವನ ಕ್ರಮ ಅತ್ಯಂತ ಮುಖ್ಯ. ಇದು ಸರಳ ಸಾಧ್ಯ. ಆದರೆ ಮೊದಲು ವ್ಯಕ್ತಿ ತನ್ನನ್ನು ಪರಿಸರದಲ್ಲಿ ಗುರುತಿಸಿಕೊಳ್ಳಬೇಕು.

ಅಕ್ಷರತೆ ಬಗ್ಗೆ ತೀವ್ರವಾಗಿ ಕಾರ್ಯೋನ್ಮುಖವಾಗಿ ತೊಡಗಿಸಿಕೊಂಡ ನಮ್ಮ ಕಾಳಜಿಗಳು, ಜೀವಿ ಪರಿಸ್ಥಿತಿಯ ಅನಕ್ಷರತೆಯನ್ನು ತೊಲಗಿಸುವ ಮುಖ್ಯ ಜವಾಬ್ದಾರಿಯನ್ನೂ ಈಗ ಹೊಂದಿದೆ. ಹಾಗೆಯೇ ಮಿತಿಯಾದ ನೈಸರ್ಗಿಕ ಸಂಪತ್ತನ್ನು ಎಲ್ಲರ ಒಳಿತಿಗಾಗಿ ಕನಿಷ್ಟ ಅವಶ್ಯಕತೆಗಳಿಗಾಗಿ ಬಳಸಬೇಕಾದ ಜವಾಬ್ದಾರಿ ಕೂಡಾ ಮುಂದಿದೆ.

ಪರಿಸರ ಚಳುವಳಿಗಳು ವ್ಯಕ್ತಿ ಹಾಗೂ ಸಮೂಹದ ಸಾಮಾಜಿಕ ಬದಲಾವಣೆ ಹಾಗೂ ಬೆಳವಣಿಗೆಯಿಂದ ಮಾತ್ರ ಸಾಧ್ಯ. ಆಗ ಮಾತ್ರ ಅದು ನಿಜವಾದ ಅರ್ಥದಲ್ಲಿ ಪರಿಸರ ಚಳುವಳಿ ಆಗಿರುತ್ತದೆ. ಜನರ ಅರಿವಿಗಾಗಿ... ಮಾಲಿನ್ಯದ ಅರಿವಿಗಾಗಿ ಜನ ಜೀವನದಲ್ಲಿ ಮಿಂಚಾಗಿ ಹಾಯ್ದು ಹೋಗುವ ಪರಿಸರ ಕಾಳಜಿ, ತಿಕ್ಕಾಟಗಳು ಪರಿಸರ ಚಳುವಳಿಯಾಗಲಾರವು. ಹಾಗೆಯೇ, ವ್ಯಕ್ತಿ ಪ್ರಾಧಾನ್ಯವಾದ ಸ್ಪಷ್ಟ ತಾತ್ವಿಕ ದೃಷ್ಟಿಕೋನವನ್ನು ಹೊಂದಿರದ ಅನೇಕ ಸಂಘಟನೆಗಳು ಹೆಸರು ಮಾತ್ರಕ್ಕೆ ಪರಿಸರ ಚಳುವಳಿಯ ಹಾಗೂ ಪರಿಸರ ಸಂರಕ್ಷಣೆಯ ಪ್ರವಾದಿಗಳಾಗಿರುತ್ತವೆ. ಪ್ರಕೃತಿಯನ್ನು ಆರಾಧಿಸುವ ಪರಿಸರವನ್ನು ಸಂರಕ್ಷಿಸುವ ರೀತಿಯಲ್ಲಿ ಬದುಕಲೆತ್ನಿಸುವ ವ್ಯಕ್ತಿಯ ಮನಸ್ಸಿನ ಬದಲಾವಣೆ ನಿಜವಾದ ಪರಿಸರ ಚಳುವಳಿಯ ಮೂಲಬಿಂದು. ಅಲ್ಲಿ ಬಲ್ಲವ ಸ್ವಲ್ಪ ತಿಳಿದವರ ಮೇಲೆ ಪರಿಸರ ಸಂರಕ್ಷಣೆಗಾಗಿ ತನ್ನ ರಾಜಕೀಯ ಮಾಡುವ ಅವಕಾಶವಿರುವುದಿಲ್ಲ. ಹಾಗೂ ಹಾದಿಗಳನ್ನು ತೋರಿಸುವ ದಾರ್ಶನಿಕತೆ ಇರುವುದಿಲ್ಲ.

ಎಲ್ಲಾ ಕಾಲಕ್ಕೂ ಎಲ್ಲ ತಾತ್ವಿಕ ಅವಲೋಕನಗಳಿಂದಾಚೆಗೆ ನಿಲ್ಲುವ ಬುದ್ಧ ವ್ಯಕ್ತಿಯ ಮಾನಸಿಕ ಹಾಗೂ ಹೊರ ಪರಿಸರದ ಸತ್ಯಶೋಧನೆಗೆ ಹಾಗೂ ಪರಿಸರದ ಸಂರಕ್ಷಣೆಗೆ ವೈಜ್ಞಾನಿಕ ಆಧಾರಗಳನ್ನು ಗುರುತಿಸಿಕೊಟ್ಟ, ಒಳಪರಿಸರ ಹುಡುಕಿದ, ಪರಿಸರ ಚಳುವಳಿಗಾರ ಎನ್ನಬಹುದು. ಆಲ್ಬರ್ಟ್ ಐನ್‌ಸ್ಟೀನ್ ಇದೇ ಕಾರಣಕ್ಕೆ ಬೌದ್ಧ ತಾತ್ವಿಕ ದೃಷ್ಟಿಕೋನವನ್ನು "ಭವಿಷ್ಯದ ಜನಾಂಗಕ್ಕೆ ಬೇಕಾದ ವೈಜ್ಞಾನಿಕ ಮನೋಭಾವದ ಧರ್ಮ" ಎಂದು ಕರೆದರು. ವ್ಯಕ್ತಿಯ ಮಟ್ಟದಲ್ಲಿ ಪರಿಸರ ಚಳುವಳಿ ಇಡೀ ಬದುಕಿನುದ್ದಕ್ಕೂ ಉಳಿಯುವ ಒಂದು ಧಾರ್ಮಿಕ ಕಾರ್ಯವಿಧಾನ ಹಾಗೂ ಜೀವಕ್ರಿಯೆ. ಇದಕ್ಕಾಗಿ ವಸ್ತುನಿಷ್ಠೆಯ, ವೈಜ್ಞಾನಿಕ ಆಧಾರಗಳ, ಸಕಾರಣಗಳ ಶಕ್ತಿಯ ಮೇಲೆ ಬದುಕನ್ನು ನೋಡುವ ಮನೋಭಾವ ಅತ್ಯಂತ ಅನಿವಾರ್ಯ.

ಇಂತಹ ಒಂದು ಸ್ಪಷ್ಟತೆ ಎಲ್ಲಾ ಧರ್ಮಗಳು, ಜಾತಿಗಳು, ಆಚಾರವಿಚಾರಗಳನ್ನು ದಾಟಿ ಜೀವಪರಿಸ್ಥಿತಿ ಹಾಗೂ ಪರಿಸರವನ್ನು ಸಂರಕ್ಷಿಸುವ ಒಂದು ಧರ್ಮ ವ್ಯಕ್ತಿಯ ಮಟ್ಟದಲ್ಲಿ ಉಳಿದು ಸಮೂಹಮಟ್ಟವನ್ನು ಸೇರಿದಾಗ ಒಂದು ಸಾಮಾಜಿಕ ಬದ-ಲಾವಣೆಗೆ ನಾಂದಿಯಾಗುತ್ತದೆ.

ಜಗತ್ತಿನಾದ್ಯಂತ ಜನರ ಸಂಕಷ್ಟಗಳನ್ನು ಸಂಕೋಲೆಗಳನ್ನು ಹಾಗೂ ಅನ್ಯಾಯ ದಿಂದ ಅವರನ್ನು ಮುಕ್ತಗೊಳಿಸಿದ ಜನಸಾಮಾನ್ಯರ ಬದುಕನ್ನು ಮಾರ್ಪಡಿಸಿದ ಬುದ್ಧ ಗಾಂಧಿ ಇನ್ನಿತರ ಸಾಮಾಜಿಕ ಕ್ರಾಂತಿ ನಾಯಕರು, ಸಾಮಾಜಿಕ ಪರಿಸರ ಚಳುವಳಿಯ ಸ್ಫೂರ್ತಿದಾಯಕ ನೇತಾರರು. ಬದುಕನ್ನು ತಮ್ಮ ಇರುವಿಕೆಯೊಂದಿಗೆ ನೋಡಲು ಎಚ್ಚರಿಸಿ ತಮಗೆ ತೋರಿದ ಮಾರ್ಗಗಳನ್ನು ಜನರ ಮುಂದಿಟ್ಟು ಇವರು ಪರಿಸರದ ಅರಿವಿಗೆ ನಾಂದಿ ಹಾಡಿದರು.

ಇಂದಿಗೂ, ಜೀವವನ್ನು ಲೆಕ್ಕಿಸದೆ ಸಾಗರದಲ್ಲಿನ ಜೀವಚರಗಳನ್ನು ಸಂರಕ್ಷಿಸಲು ತಮ್ಮ ದೇಹವನ್ನೇ ರಾಸಾಯನಿಕಗಳಿಗೆ ಒಡ್ಡುವ 'ಗ್ರೀನ್ ಪೀಸ್' ಚಳುವಳಿಗಾರರು, ಜಗತ್ತಿನಲ್ಲಿ ಶಾಂತಿಗಾಗಿ ಶಸ್ತ್ರಾಸ್ತ್ರಗಳನ್ನು ಸಂಪೂರ್ಣವಾಗಿ ತೊಡೆದು ಹಾಕಲು ಚಳುವಳಿಮಾಡುವ ಶಾಂತಿಪ್ರಿಯರು ; ಅಣುಶಕ್ತಿಯನ್ನು ಯಾವುದೇ ಬಗೆಯಲ್ಲಿ ಬಳಸುವುದನ್ನು ವಿರೋಧಿಸುವ ಅಣುವಿರೋಧಿ, ವಾಯುಮಾಲಿನ್ಯ, ಜಲಮಾಲಿನ್ಯ ದಿಂದ ಎಚ್ಚೆತ್ತು ಜನಹಿತಕ್ಕಾಗಿ ಹೋರಾಡುವ ಗುಂಪುಗಳು, ಔಷಧಿಗಳಿಂದಾಗುವ ಹಾನಿಗಳ ಬಗ್ಗೆ ಧ್ವನಿ ಎತ್ತುವವರು, ಎಲ್ಲರವೂ ಒಂದು ಸಂದರ್ಭದಲ್ಲಿ ಪರಿಸರದ ಕಾಳಜಿಯುಳ್ಳ ಚಟುವಟಿಕೆಗಳಾಗಿಯೇ ಇವೆ.

ಇಂತಹ ಹಿನ್ನೆಲೆಯಲ್ಲಿ ನಮ್ಮ ಮುಂದಿರುವ ಪ್ರಶ್ನೆಯಾದರೂ ಪರಿಸರ ಚಳುವಳಿಗೆ ಮೂಲತಃ ಮಾನಸಿಕ ಸಿದ್ಧತೆ ವೈಜ್ಞಾನಿಕ ಮನೋಭಾವದ ಜೊತೆಗೆ ಪರಿಸರ ಸ್ನೇಹಮಯವಾದ ಮೌಲ್ಯಗಳನ್ನು ಮೈಗೂಡಿಸಿಕೊಂಡಿರಬೇಕಾಗುತ್ತದೆ. ಜಗತ್ತಿನಾದ್ಯಂತ ದೀನದಲಿತರ, ಬಡಜನರ ಸಂಕಷ್ಟಗಳು ಉಲ್ಬಣವಾಗುತ್ತಲೇ ಸಾಗಿವೆ. ಕೇವಲ ಒಂದು ಬಿಲಿಯನ್ ಜನಸಂಖ್ಯೆಯ ಮುಂದುವರೆದ ರಾಷ್ಟ್ರಗಳು ಇಡೀ ಮಾನವ ಜನಾಂಗದ 5.5 ಬಿಲಿಯನ್ ಜನಸಂಖ್ಯೆಯನ್ನು ಕನಿಷ್ಠ ಸವಲತ್ತುಗಳನ್ನು ಯಶಸ್ವಿಯಾಗಿ ಪೂರೈಸಬಲ್ಲ ಶಕ್ತಿ ಮತ್ತು ವಸ್ತುಗಳನ್ನು ಶೋಷಣೆಮಾಡಿ— ಪರಿಸರವನ್ನು ವಿನಾಶದ ಅಂಚಿಗೆ ಈಗಾಗಲೇ ತಲುಪಿಸಿವೆ.

ಇಂದಿನ ಜಾಗತಿಕ ಪರಿಸರದ ನಿಜವಾದ ಸಮಸ್ಯೆಗಳಾದ ಭೂಮಿಯ ಉಷ್ಣತೆ ಏರುವಿಕೆ, ಅರಣ್ಯ ನಾಶ, ಭೂಸವೆತ, ಜಲಮಾಲಿನ್ಯ, ವಾಯುಮಾಲಿನ್ಯ, ಅನಾರೋಗ್ಯ, ವಸತಿ ಹೀನತೆಗೆ ಪರೋಕ್ಷವಾಗಿ ಮುಂದುವರೆದ ರಾಷ್ಟ್ರಗಳು ಕಾರಣವಾಗಿವೆ. ಇಂದಿಗೂ ಜಗತ್ತಿನ ಬಹುಪಾಲು ನೈಸರ್ಗಿಕ ಸಂಪನ್ಮೂಲವನ್ನು ನಿರಂತರವಾಗಿ ಶೋಷಣೆ

ಮಾಡುವ ಪರಿಪಾಠ ಸಾಗಿದೆ. ಬಡರಾಷ್ಟ್ರಗಳಿಗೆ ಇದರಿಂದ ಬಹುಜನರ ಅವಶ್ಯಕತೆಗಳಿಗೆ ಸಂಪನ್ಮೂಲದ ನಿರಾಕರಣೆ ಆಗುತ್ತಿದೆ.

ಕಳೆದ 20 ವರ್ಷಗಳ ನಿರಂತರ ಪರಿಸರ ಸಮಸ್ಯೆಗಳ ಅಧ್ಯಯನಗಳಿಂದ ಕಂಡು ಕೊಂಡ ಅಂಶಗಳು :

1. ಭೂಮಿಯು ಸಲುಹುವ ಮಿತಿಯೊಳಗೆ ಮಾನವ ಜನಾಂಗ ತನ್ನ ಬದುಕನ್ನು ರೂಪಿಸಿಕೊಳ್ಳಬೇಕು. ಜಗತ್ತಿನ ಸಂಖ್ಯೆ ಇನ್ನು 60 ವರ್ಷಗಳಿಗೆ ದ್ವಿಗುಣ ವಾಗಲಿದೆ.

2. ಮಿತಿಯಾದ ಜೀವ ಪೋಷಕ ಸಂಪನ್ಮೂಲಗಳನ್ನು ಸಮವಾಗಿ ಎಲ್ಲರ ಬಳಕೆಗಾಗಿ ಉಪಯೋಗಿಸದಿದ್ದರೆ ಬಹುಪಾಲು ಜನರ ಭವಿಷ್ಯವನ್ನು ನಿರಾಕರಿಸಿದಂತಾಗು ತ್ತದೆ. ಇಂದಿಗೂ ಪ್ರತಿಯೊಂದು ಪರಿಸರ ಹಾನಿ ದೀನ ದಲಿತರ ಬದುಕಿಗೆ ಒಂದು ಅನಿಷ್ಟ ಪ್ರಹಾರವಾಗಿದೆ.

3. ನಮ್ಮಗಳ ಬದುಕುವ ಜೀವನ ರೀತಿ ಹಾಗೂ ಅಭಿವೃದ್ಧಿಯ ಹೆಜ್ಜೆಗಳು ನಿಸರ್ಗದ ನಿಯಮಗಳನ್ನು ಗೌರವಿಸುವಂತಿರಬೇಕು. ಉಳಿಸಿಕೊಳ್ಳಬಹುದಾದ ಅಭಿವೃದ್ಧಿ ಹಾಗೂ ಬೆಳವಣಿಗೆ ನಮ್ಮದಾಗಬೇಕು. ಪರಿಸರ ಸ್ನೇಹಮಯವಾದ ತಂತ್ರಜ್ಞಾನವನ್ನು ಬಳಸಿಯೂ ಕೂಡ ವಿವಿಧ ಪ್ರಯೋಜನಗಳನ್ನು ಪಡೆಯ ಬಹುದಾಗಿದೆ.

ನಮ್ಮ ದೇಶದಲ್ಲಿ ಜನರು ಕೊಳ್ಳುವ ಶಕ್ತಿ ನಿರಂತರವಾಗಿ ಕ್ಷೀಣಿಸುತ್ತಿರುವ, ಅರ್ಧದಷ್ಟು ಜನರು ಬಡತನದ ರೇಖೆಯ ಕೆಳಗೆ ಇರುವಾಗ, ರೋಗರುಜಿನ, ಹಸಿವು, ಬಡತನ, ದಾರಿದ್ರ್ಯ ಎಲ್ಲೆಡೆ ತಾಂಡವವಾಡುತ್ತಿರುವಾಗ, ಒಂದೆಡೆ ಕೆಲವರು ಅಧಿಕಾರದ ಸಹಾಯದಿಂದ ಮಿತಿಯಾದ ನೈಸರ್ಗಿಕ ಸಂಪತ್ತನ್ನು ಸೂರೆ ಮಾಡುತ್ತಿದ್ದಾರೆ. ಬಹುಪಾಲು ಜನರು ಮೂಲಭೂತ ಸೌಕರ್ಯ, ಶೌಚಾಲಯ ವಿಲ್ಲದೆ, ಕನಿಷ್ಠ ವಸತಿ, ಶಿಕ್ಷಣ, ಆಹಾರದಿಂದ ವಂಚಿತರಾಗಿರುವ ನಮ್ಮ ಸಾಮಾಜಿಕ ಪರಿಸ್ಥಿತಿಯಲ್ಲಿ ಪರಿಸರ ಚಳುವಳಿಗಳು ಎಷ್ಟು ಪ್ರಸ್ತುತ ಎಂಬುದು ನಿಜಕ್ಕೂ ಪ್ರಾಮಾಣಿಕವಾಗಿ ಪರಿಸರ ಸಮಸ್ಯೆಗಳ ಬಗ್ಗೆ ಚಿಂತಿಸುವವರನ್ನು ಕಾಡಿರುತ್ತದೆ. ನಿಜವಾದ ಅರ್ಥದಲ್ಲಿ ಯಾವುದೇ ಪರಿಸರ ಚಳುವಳಿ ಬಹುಸಂಖ್ಯಾತ ಜನರ ಬದುಕಿಗೆ ಅನುಕೂಲಕರವಾದ ಪರಿಸರವನ್ನು ನಿರಂತರವಾಗಿ ಸಂರಕ್ಷಿಸುವಂತದ್ದಾಗಿರಬೇಕು.

ಮುಂದುವರೆಯುತ್ತಿರುವ ಸಮಾಜದಲ್ಲಿ ನಾವುಗಳು ನಮ್ಮ ಸಾಮಾಜಿಕ ಪರಿಸ್ಥಿತಿಗೆ ಅನುಗುಣವಾಗಿ ಪರಿಸರದ ಸಂರಕ್ಷಣೆಗೆ ಮುಂದಾಗುವುದು ಪ್ರತಿಯೋರ್ವರ

ಜವಾಬ್ದಾರಿಯಾಗಿದೆ. ಮೂಲತಃ ಅಸಹನೆ, ಅಸೂಯೆ, ಜಾತಿಮತಗಳ ಬೇಧಭಾವಗಳ ದಾಟಿ ನಿಲ್ಲುವ ಮಾನಸಿಕ ಸಿದ್ಧತೆ ವೈಜ್ಞಾನಿಕ ಮನೋಭಾವದ ಬೆಳವಣಿಗೆಯಿಂದಾಗ ಬೇಕು. ಹಳ್ಳಿ, ಪಟ್ಟಣಗಳ ಗೃಹ, ಕೃಷಿ ಕೈಗಾರಿಕೆ ಹಾಗೂ ಸವಲತ್ತಿನ ವಿವಿಧ ಚಟುವಟಿಕೆಗಳಿಂದಾಗುವ ವಾಯು, ಜಲ, ಇನ್ನಿತರ ಹಾನಿಕಾರಕ ಪರಿಸ್ಥಿತಿಗಳನ್ನು ವೈಜ್ಞಾನಿಕ ಮಾಹಿತಿ ಆಧಾರ ಸರಳ ಅಧ್ಯಯನಗಳಿಂದ ಪ್ರಮಾಣೀಕರಿಸುವ ಕೆಲಸವಾಗಬೇಕು. ಪರಿಸರ ಗುಣಮಟ್ಟ ಅಧ್ಯಯನ ಒಂದು ಮರಣೋತ್ತರ ಪರೀಕ್ಷೆ ಯಾಗಬಾರದು. ನೈಜಕಾಲಿಕವಾಗಿ ಪರಿಸರದಲ್ಲಾಗುತ್ತಿರುವ ಹಾನಿಕಾರಕ ಪರಿಸ್ಥಿತಿ ಯನ್ನು ದಾಖಲೆಗೊಳಿಸುವ ಕೆಲಸ ಮೊದಲಾಗಬೇಕು.

ಪರಿಸರದ ಸಮಸ್ಯೆಗಳು ಅದರ ವಿವಿಧ ರೂಪಗಳು ಆಯಾ ಭೌಗೋಳಿಕ, ಸಾಮಾಜಿಕ, ಸಾಂಸ್ಕೃತಿಕ ಹಾಗೂ ಆರ್ಥಿಕ ಪರಿಸ್ಥಿತಿಗೆ ಅನುಗುಣವಾಗಿರುತ್ತದೆ. ಆಯಾ ಸಮಸ್ಯೆಗಳಿಗೆ ಸ್ಪಷ್ಟವಾದ ಉತ್ತರವನ್ನು ಸಮಸ್ಯೆಯನ್ನು ವೈಜ್ಞಾನಿಕವಾಗಿ ದಾಖಲಿಸಿ ದಾಗ ಮಾತ್ರ ಸಾಧ್ಯ. ಇದುವರೆಗೆ ಕೇವಲ ಪರಿಸರದ ಅರಿವಿನ ಮಡಿಲಿನಲ್ಲಿ ಬೆಳೆದ ಮನಸುಗಳಿಗೆ—ನಿಜವಾದ ಪರಿಸರ ಸಮಸ್ಯೆಗಳನ್ನು ಪ್ರಾಮಾಣೀಕರಿಸುವ ಕೆಲಸ ಈಗ ಕರ್ನಾಟಕದಲ್ಲಿ ಜನಪ್ರಿಯ ವಿಜ್ಞಾನ ಚಳುವಳಿಯ ಆಶ್ರಯದಲ್ಲಿ ನಡೆಯಬೇಕಾಗಿದೆ. ಆಗಲೇ ನಾವುಗಳು, ವ್ಯಕ್ತಿ ಹಾಗೂ ಸಾಮೂಹಿಕ ಮಟ್ಟದಲ್ಲಿ ಸಹಜವಾಗಿಯೇ ಪರಿಸರ ಚಳುವಳಿಯ ಭಾಗಿಗಳಾಗುತ್ತೇವೆ.

---

**ಮತ್ತೆ ಹೊರಟಿತು ನರನ ಹಿಂಡು ಹುಸಿ ಬವಣೆಯಲಿ–**
**ಏಕೋ ಏನೋ ಬಾಳ್ವೆವೆಂಬ ಛಲವು !**
**ಈ ಕಿಕ್ಕಿರಿದ ಮನೆಯ ಸಾಲು, ಈ ಹೊಗೆ ಹೊಲಸು–**
**ಬೇನೆ ಬಿದ್ದಿಹುದಿಲ್ಲಿ ಬುವಿಯ ಚೆಲುವು !**

**—ಗಂಗಾಧರ ಚಿತ್ತಾಲ**
(ಇಲ್ಲಿಯ ಜೀವನ)

---

# ಮುದ್ದಣ್ಣ ಕಾವ್ಯ ಪ್ರಶಸ್ತಿ ವಿಜೇತ ಮೂರು ಸಂಕಲನಗಳು

—ಎನ್. ಎಸ್. ಶ್ರೀಧರಮೂರ್ತಿ

ಆಧುನಿಕ ಕನ್ನಡ ಕಾವ್ಯದ ಕುರಿತು ಚಿಂತಿಸುವಾಗ ಮುಖ್ಯವಾಗಿ ನಮ್ಮ ಕಣ್ಣ ಮುಂದೆ ನಿಲ್ಲುವುದು. ಪ್ರಸ್ತುತ ಕಾವ್ಯ ತಂತ್ರಗಳನ್ನು ತಮ್ಮ ಸಹಜ ಅಭಿವ್ಯಕ್ತಿಗೆ ಒಗ್ಗಿಸಿಕೊಳ್ಳಲು ಕವಿಗಳು ಪಡುತ್ತಿರುವ ಪಾಡು. ಇಂತಹ ಹಂತದಲ್ಲಿ ಬರುವ ಪ್ರತಿ ಸಂಕಲನಗಳು ಕಾವ್ಯದ ಪಾರಿಭಾಷೆಯನ್ನು ತಮ್ಮದೆ ನೆಲೆಯಲ್ಲಿ ಹಿಗ್ಗಿಸುತ್ತದೆ. ಹಾಗಾಗಿಯೇ ಇಲ್ಲಿ ಶ್ರೇಷ್ಠತೆ ಪ್ರಶ್ನೆ ಸಹಜವಾಗಿಯೆ ಸಾಪೇಕ್ಷವಾಗಿ ಬಿಡುತ್ತದೆ. ಆದರೆ ಮಾಧ್ಯಮ ತನ್ನದೇ ಆದ ಗುಣಗಳನ್ನು ಉಳಿಸಿಕೊಳ್ಳುವ ಕಡೆಗಿನ ಕಾಳಜಿ ಈ ಅಂಶವನ್ನು ಪೂರ್ಣ ನಿರ್ಲಕ್ಷಿಸುವುದನ್ನು ನಿರ್ಬಂಧಿಸುತ್ತದೆ. ಇದರಿಂದಲೆ ಪ್ರಶಸ್ತಿ ಮಾನದಂಡಗಳು ಒಂದು ಅರ್ಥದಲ್ಲಿ ಕಾವ್ಯ ನಿರ್ಮಿತಿ ಸೂತ್ರಗಳ ಮಾರ್ಗದರ್ಶಿತ್ವವನ್ನು ಅರ್ಥೈಸುತ್ತವೆ.

ಮುದ್ದಣ್ಣ ಕಾವ್ಯ ಪ್ರಶಸ್ತಿ ಪಡೆದ ಮಹಬಲ ಮೂರ್ತಿ ಕೊಡ್ಲೆಕೆರೆ ಅವರ "ಮತ್ತೆ ಏಳಲು ಪೂರ್ವದಿಂದ" (1989) ಪ್ರತಿಭಾ ನಂದ ಕುಮಾರ್ ಅವರ "ರಸ್ತೆಯಂಚಿನ ಗಾಡಿ" (1990) ಮತ್ತು ಸ. ರಘುನಾಥ್ ಅವರ "ದಾರಿ ಮತ್ತು ಆಕಾಶ" (1991) ಕವನ ಸಂಕಲನಗಳನ್ನು ಕುರಿತು ಮಾತನಾಡುವಾಗ ಈ ಅಂಶ ಪರಿಶೀಲಿಸುವುದು ಅನಿವಾರ್ಯ ಎಂದು ನನಗನ್ನಿಸಿತು. ತನ್ನ ಪ್ರಶಸ್ತಿಗೆ ಈ ಮೂರು ಪುಸ್ತಕಗಳನ್ನು ಆರಿಸುವುದರ ಮೂಲಕ ಕಾಂತವರ ಕನ್ನಡ ಸಂಘ ಕಾವ್ಯದ ಒಂದು ಮುಖ್ಯ ಸೂತ್ರಕ್ಕೆ ತನ್ನ ಒಲವು ತೋರಿಸಿದೆ. ಏಕೆಂದರೆ ಈ ಮೂರು ಪುಸ್ತಕಗಳಲ್ಲಿನ ಕಾವ್ಯಲಯಕ್ಕೆ ಒಂದು ನಿರ್ದಿಷ್ಟ ಸಮಾನಂತರತೆ ಇದೆ, ಭಾಷೆಯ ಬಳಕೆಗೆ ಬಂದು ಸಹಜತೆ ಇದೆ. ಪ್ರತಿಮೆಗಳ ಪ್ರಯೋಗಕ್ಕೆ ನಾವಿನ್ಯತೆಯ ಹೋಲಿಕೆ ಇದೆ. ಈ ಮೂಲಕ ಪ್ರಶಸ್ತಿಯ ಮಾನದಂಡ ಸೂತ್ರಗಳು ಒಂದು ನಿರ್ದಿಷ್ಟ ಕಾವ್ಯ ನಿರ್ಮಿತಿಯತ್ತ ಒಲವು ತೋರಿಸುತ್ತಿರುವುದು ಸುಸ್ಪಷ್ಟ.

ಉಳಿದಿಬ್ಬರಿಗೆ ಹೋಲಿಸಿದರೆ ಕೊಡ್ಲೆಕೆರೆಯವರು ಭಾಷೆಯ ಕುರಿತು ಕಾಳಜಿ ಯಿಂದ ವರ್ತಿಸುವುದಿಲ್ಲ. ಇವರ ಕಾವ್ಯ ಸೂಕ್ಷ್ಮ ಕಲೆಗಾರಿಕೆಯಿಂದ ದೂರವಾದದ್ದು

ಇವರ ಯಶಸ್ಸೆಲ್ಲವು ವಸ್ತು ಕೇಂದ್ರಿಕೃತ ವಿನ್ಯಾಸವನ್ನು ಅವಲಂಬಿಸಿದ್ದು. ನಿರ್ದಿಷ್ಟ ವಸ್ತುವನ್ನು ಅವಲಂಬಿಸಿದ ಅವರ "ಮೈಕಲ್ ಚಾಂಗ್", "ಸಂತಾನಂ" ಇಂತಹ ಕವಿತೆಗಳು ತಮ್ಮ ಇತಿಮಿತಿಗಳಲ್ಲೆ ಯಶಸ್ಸನ್ನು ಪಡೆದರೆ, "ಹಾವು" "ಮುಖಗಳು" ಅಂತಹ ಮಹತ್ವಾಕಾಂಕ್ಷೆ ಕವಿತೆಗಳು ಸ್ಪಷ್ಟ ವೈಚಾರಿಕ ಹಿನ್ನೆಲೆಯಿಲ್ಲದ ನಿಬಿಡ ಪ್ರತಿಮೆಗಳ ಭಾರದಿಂದ ಸೊರಗಿ ಬಿಡುತ್ತವೆ. ಮಹಬಲ ಮೂರ್ತಿ ಕೊಡ್ಲೆಕೆರೆಯವರು ಕಾವ್ಯದ ತಾಂತ್ರಿಕ ಅಂಶಗಳ ಕುರಿತು ಗಮನ ಹರಿಸಿ,ನಿರ್ದಿಷ್ಟ ವೈಚಾರಿಕ ಬೆನ್ನೆಲುಬುಗಳನ್ನು ಕಟ್ಟುಕೊಂಡು ಹೊಸ ಆಯಮ ತಡೆಯುವಲ್ಲಿ ಗೆದ್ದರೆ, ಪ್ರಸ್ತುತ ಸಂಕಲನ ಅವರಿಗೆ ಒಂದು ರಂಗ ಸಜ್ಜಿಕೆ ಎನ್ನಿಸುತ್ತದೆ.

ಆದರೆ ಕಾವ್ಯದಲ್ಲಿ ತಾಂತ್ರಿಕ ಅಂಶಗಳಷ್ಟೇ ಮುಖ್ಯವಾಗುವುದಿಲ್ಲ. ಕಾವ್ಯದ ಒಟ್ಟು ವಿನ್ಯಾಸ ಅದು ಹೊರಡಿಸುವ 'ಧ್ವನಿ'ಯನ್ನು ಕೇಂದ್ರೀಕರಿಸಿಕೊಂಡು ರೂಪುಗೊಂಡಿರುತ್ತದೆ ಈಗಾಗಲೆ ಸಾಕಷ್ಟು ಪಳಗಿರುವ ಪ್ರತಿಭಾ ನಂದಕುಮಾರ್ ಅಂತವರಿಗೆ ತಾಂತ್ರಿಕ ಅಂಶಗಳ ತೊಂದರೆ ಇರುವುದಿಲ್ಲ ಅಂದ ಮಾತ್ರಕ್ಕೆ ಅವರ ಕವಿತೆಗಳೆಲ್ಲವು ಗೆದ್ದು ಬಿಡುವುದಿಲ್ಲ ಕೆಲವೊಮ್ಮೆ ಇಂತಹ ಪರಿಣತಿಯೇ ಅವರ ಮಿತಿಯಾಗಿ ಬಿಡುತ್ತದೆ. ಉಳಿದೆರಡು ಸಂಕಲಕ್ಕೆ ಹೋಲಿಸಿದರೆ ಅಬ್ಬಬ್ಬ ಎನ್ನಿಸುವಷ್ಟು ಕವಿತೆಗಳನ್ನು ಹೊಂದಿರುವ ಅವರ ಸಂಕಲನ, ಕೆಲವು ಅತಿ ಮಹತ್ವದ ಕವಿತೆಗಳನ್ನು ಒಳಗೊಂಡಿದೆ. "ಜೋಗತಿ" "ಬೋಧಿವೃಕ್ಷ" "ಸೌಗಂಧವತಿಯ ಸ್ವಗತ" "ಋಣಿ"ಯಂತಹ ಕವಿತೆಗಳು ಯಾವ ಪ್ರಾಕಾರಕ್ಕು ಗೌರವ ತರಬಲ್ಲವು. ವ್ಯಕ್ತಿನಿಷ್ಠ ಅನುಭವಕ್ಕೆ ವಸ್ತುನಿಷ್ಠ ವಿನ್ಯಾಸ ಜೋಡಿಸುವ "ನಾನು ಪುಟ್ಟಿ ಮಳೆ ನೋಡಿದ್ದು" ಸಂಕಲನದ ಅತಿ ವಿಶಿಷ್ಟ ಕವಿತೆ, ಆದರೆ "ಅವಸರ" ಪ್ರತಿಭಾ ಅವರ ಬರವಣಿಗೆಯಲ್ಲಿ ಎದ್ದು ಕಾಣುವ ಅಂಶ, ಈ ಕಾರಣದಿಂದಲೆ ಈ ಸಂಕಲನದ ಅನೇಕ ಕವಿತೆಗಳು ಪರಿಪೂರ್ಣತೆಯಿಂದ ವಂಚಿತವಾಗಿವೆ, ಕವಿತೆಯಂತಹ ಸೂಕ್ಷ್ಮ ಕಲೆಗಾರಿಕೆ ಧ್ಯಾನಸ್ಥ ಮನೋಸ್ಥಿತಿಯನ್ನು ಅಪೇಕ್ಷಿಸುತ್ತದೆ ಎಂದಷ್ಟೆ ಈ ಸಂಧರ್ಭದಲ್ಲಿ ಹೇಳಿ ಬಿಡ ಬಹುದೇನೂ.

ಸ. ರಘುನಾಥರ ಸಂಕಲನ ಕೆಲವು ಯಶಸ್ವಿ ಕಿರುಗವಿತೆಗಳ, ಆಸಕ್ತಿ ಹುಟ್ಟಿಸುವ ಮಹತ್ವಾಕಾಂಕ್ಷೆಯ ಕವಿತೆಗಳನ್ನೂ ಒಳಗೊಂಡಿದೆ. ಕವಿತೆಯಲ್ಲಿ ಮಹತ್ವಾಕಾಂಕ್ಷೆ ಎಂಬ ಅಂಶವೆ ಚರ್ಚಾಸ್ಪದ ಅಂಶವಾದರು. ತನ್ನ ಮಾಧ್ಯಮದ ಇತಿಮಿತಿಗಳನ್ನು ಅರಿತು ಅರ್ಥವಂತಿಕೆಯನ್ನು ಅದರಾಚೆಗಿನ ಸ್ಥರದಲ್ಲಿ ಮೂಡಿಸುವ ಕಾವ್ಯಕರ್ತೃ ಹೆಚ್ಚು ಮಹತ್ವಪೂರ್ಣ ಎನ್ನಿಸುತ್ತದೆ. ಇಂತಹ ಪ್ರಯತ್ನಗಳಿಗೆ ಯಶಸ್ಸಿನ ಸೀಮಿತ ಮಾನದಂಡ ಸಾಕಾಗುವುದಿಲ್ಲ ಅವರ "ಸಿದ್ಧರಾಮನ ಸ್ವಗತ" "ಬರದ ಮಳೆ" "ಪುನರುತ್ಥಾನ" "ಮಾನ್ಯತೆ" ಮುಂತಾದ ಕವಿತೆಗಳು ತಮ್ಮ ವಿನ್ಯಾಸದಲ್ಲಿನ ಸಂಕೀರ್ಣತೆ ಮತ್ತು ಅರ್ಥವಂತಿಕೆಯಲ್ಲಿನ ಮಹತ್ವಾಕಾಂಕ್ಷೆ ಇವೆರಡರ ಅರ್ಥಪೂರ್ಣ ಸಂಯೋಜನೆಯ ಗುರಿಯನ್ನು ಮುಟ್ಟಿವೆ ಎಂದೇ ಹೇಳಬೇಕು. ಆದರೆ "ಭೀಮ ಮರ ಬೆಳೆದುದು"

"ವಿಶ್ವರೂಪ"ದಂತಹ ಸೀಮಿತ ಚೌಕಟ್ಟನಲ್ಲಿಯು ಮಹಾತ್ವಾಕಾಂಕ್ಷೆ ಕಾಳಜಿಯನ್ನು ಬಿಂಬಿಸುವ ಕವಿತೆಗಳಲ್ಲಿಯೆ ರಘುನಾಥರು ವಿಮರ್ಶೆಯ ಪಾರಿಭಾಷೆಗೆ ಬದ್ಧನಾಗಿ ಹೇಳುವುದಾದರೆ ಗೆಲ್ಲುತ್ತಾರೆ. ಆದರೂ ಸಂಕಲನ ರಘುನಾಥರ ಮಹತ್ವಾಕಾಂಕ್ಷೆ ಕವಿತೆಯ ಪ್ರಯತ್ನಗಳನ್ನಿಟ್ಟುಗೊಂಡಿದೆ ಎಂಬ ಅರ್ಥಪೂರ್ಣ ನಿರಾಶೆ ಓದುಗನನ್ನು ಕಾಡದೆ ಹೋಗುವುದಿಲ್ಲ.

ಈ ಮೂರು ಸಂಕಲನದ ಓದುವಿಕೆಯ ನಂತರ ನನ್ನನ್ನು ಕಾಡಿದ ಕೆಲವು ಮುಖ್ಯ ಪ್ರಶ್ನೆಗಳನ್ನು ಮುಂದಿಡುತ್ತ ಈ ಬರಹವನ್ನು ಮುಗಿಸಬಹುದೇನೊ, ನಮ್ಮಲ್ಲಿ "ಕಲಾತ್ಮಕತೆ" ಎಂಬ ಹೆಸರಲ್ಲಿ ಕವಿಗಳು ಮತ್ತು ವಿಮರ್ಶಕರು ಒಟ್ಟಾಗಿ ಸೇರಿ, ಸಾಮಾನ್ಯ ಓದುಗನನ್ನು ಸಂವಹನದ ಸೌಲಭ್ಯದಿಂದ ವಂಚಿತನನ್ನಾಗಿಸಿದ್ದಾರೆಯೆ "ಸಂಕೀರ್ಣತೆ" ಎನ್ನುವುದು ಕಾವ್ಯದ ವಸ್ತುವಿನ ಅಪೇಕ್ಷೆಯನ್ನು ಅವಲಂಬಿಸುವುದರ ಬದಲು ಸಂವಹನದ ಕ್ಲಿಷ್ಟತೆ ಕಾರಣವಾಗಿರುವುದೇಕೆ? ಮತ್ತು ಮೂರು ಸಂಕಲನಗಳು "ಗೇಯತೆ"ಯನ್ನು ಒಪ್ಪಿಕೊಳ್ಳುವುದಿಲ್ಲವಾದುರು ಇದರಲ್ಲಿನ ಜೀವಂತಿಕೆ ಉಳಿಸಿರುವ "ಲಯ"ದ ಸ್ವರೂಪ ಏನು ? ಇದಕ್ಕೆ ನಿರ್ದಿಷ್ಟ ಸೂತ್ರಗಳಿಲ್ಲವೆ ? ಅಥವಾ ಕವಿತೆಯ ಅನುಭವದ ತೀವ್ರತೆಗೆ ಲಯದ ತಾಳ ಅನಗತ್ಯ ಎನ್ನಿಸುವ ಸನ್ನಿವೇಶ ತಲುಪಿದ್ದೇವೆಯೆ? ಇಂತಹ ಪ್ರಶ್ನೆಗಳನ್ನು ಬರೀ ಈ ಸಂಕಲನಗಳಷ್ಟೆ ಅಲ್ಲ ಪ್ರಸ್ತುತ ಕಾವ್ಯ ಮತ್ತು ವಿಮರ್ಶೆಯ ನೆಲೆಗಳನ್ನು ಗಮನದಲ್ಲಿಟ್ಟುಕೊಂಡು ಕೇಳುತ್ತಿದ್ದೇನೆ.

---

...ಒಂದು ತುತ್ತನ್ನು ಮೂವತ್ತೆರಡು ಸಲ ಜಗಿದು, ನುರಿಸಿ
ಜೊಲ್ಲಿಗೆ ವಿಲಾಯಿಸುವಷ್ಟು ಆರೋಗ್ಯ
ಶಾಸ್ತ್ರದ ಮೊದಲ ಪಾಠ ಕಲಿಸು. ಕಲಿಸದಿದ್ದರು ಕೂಡ
ಕಲಿತಿಲ್ಲ ಎಂಬ ನೆನಪುಳಿಸು. ಉಳ್ಳಾಗಡ್ಡೆ
ತಿಂದು ಕೊರಳೆಲ್ಲ ಕಸ್ತೂರಿಯಾಗುವುದೆಂಬ
ಭ್ರಮೆಯ ಕಳೆ, ದೊಡ್ಡ ದೊಡ್ಡ ಮಾತು ಬೆಲೂನು
ಹಿಗ್ಗುವಾಗೆಲ್ಲ ತಾಗಿಸು ನಿಜದ ಸೂಜಿಮೊನೆ...

—ಗೋಪಾಲಕೃಷ್ಣ ಅಡಿಗ
('ಪ್ರಾರ್ಥನೆ' ಪದ್ಯದಿಂದ)

---